# ತಿ. ತಿ. ದೇವಸ್ಥಾನಗಳು, ತಿರುಪತಿ.



## ಒಂದು ಹಕ್ಕಿನೋಟ

1. ದೇವಸ್ಥಾನಗಳು 42
2. ಸ್ಥಳಾವಕಾಶ
   ಅ) ಉಚಿತ ಕೊಠಡಿಗಳು 1102
   ಆ) ಬಾಡಿಗೆ ಕೋಣೆಗಳು, ಮನೆಗಳು 812
   ಇ) ಅತಿಥಿ ಗೃಹಗಳು 4
3. ಫಲಾಹಾರ ಮಂದಿರಗಳು 5
4. ಆಸ್ಪತ್ರೆಗಳು 7
5. ಶೈಕ್ಷಣಿಕ ಸಂಸ್ಥೆಗಳು
   ಅ) ಸಂಸ್ಕೃತ ಹಾಗೂ ಧಾರ್ಮಿಕ 5
   ಆ) ಕಲಾ, ವಿಜ್ಞಾನ ಕಾಲೇಜುಗಳು 5
   ಇ) ಸಾಂಸ್ಕೃತಿಕ ಹಾಗೂ ತಾಂತ್ರಿಕ 4
   ಈ) ಶಾಲೆಗಳು 8
6. ದತ್ತಿ ಸಂಸ್ಥೆಗಳು 2
7. ಉದ್ಯಾನವನ ಹಾಗೂ ಪುಷ್ಪವಾಟಿಕೆಗಳು 28 (312 ಎಕರೆ)
8. ಹಯನೋತ್ಪಾದನೆ
   ಅ) ಜಾನುವಾರು ಸಂಖ್ಯೆ 439
   ಆ) ಬೇಸಾಯದ ಭೂಮಿ ಎಕರೆ 150
   ಬೀಡು ಭೂಮಿ " 110
9. ಕಾನನ ಪ್ರದೇಶ ಎಕರೆ 6610 (26.75, ಚ.ಕೀ.ಮೀ)
10. ತೀರ್ಥಗಳು 16
11. ಅಣೆಕಟ್ಟುಗಳು(ಪೂರ್ಣಗೊಂಡದ್ದು, ಕಾಮಗಾರಿಯಲ್ಲಿರುವುದು) 2
12. ವಸ್ತು ಸಂಗ್ರಹಾಲಯಗಳು 2
13. ವಿಭಾಗಗಳು 58
14. ಕೆಲಸಗಾರರು (ಎಲ್ಲ ರೀತಿಯವರೂ ಸೇರಿ) 5392
15. ಮುದ್ರಣ ಶಾಲೆ 1
16. ಪ್ರಕಟನೆಗಳು
   ಅ) ಮಾಸಪತ್ರಿಕೆ ಸಪ್ತಗಿರಿ (5 ಭಾಷೆಗಳಲ್ಲಿ)
   ಆ) ವಾರ್ಷಿಕ ಪಂಚಾಂಗ
   ಇ) 1979–80 ರಲ್ಲಿ ಧಾರ್ಮಿಕ ಹಾಗೂ ಎಚ್.ಡಿ.ಆರ್.ಎಸ್. ಪ್ರಕಟನೆಗಳು 65
17. ಹಿಂದೂಧರ್ಮರಕ್ಷಣ ಸಂಸ್ಥೆಯ ಶಾಖೆಗಳು 14
18. ವಿಚಾರಣಾ ಕೇಂದ್ರಗಳು 17
19. ಕಲ್ಯಾಣ ಮಂಟಪಗಳು 9
20. ಯಾತ್ರಿಕರ ಸಂಖ್ಯೆ
   1979–80 61, 10, 032
   1–4–80 ರಿಂದ 30–9–80 ವರೆಗೆ 38,54,469
   1980 ಅಕ್ಟೋಬರ್ ತಿಂಗಳಿನಲ್ಲಿ 6,62,486
21. ಆದಾಯ (ಎಲ್ಲ ಬಾಬ್ತುಗಳಿಂದಲೂ ಸೇರಿ)
   1979–80 ರೂ 15, 78, 31, 137
   1–4–80 ರಿಂದ 30–9–80 ವರೆಗೆ ರೂ 9,88,86,843
22. 1980ರ ಅಕ್ಟೋಬರ್ ತಿಂಗಳಿನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಯ ವಸೂಲಾತಿ ರೂ 1, 14, 28, 516



ಶ್ರೀವನಿತೆಯರಸನೆ ವಿಮಲ ರಾ
ಜೀವ ಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನನಿಕರ ದಾತಾರ
ರಾವಣಾಸುರ ಮಥನ ಶ್ರವಣ ಸು
ಧಾವಿನೂತನ ಕಥನ ಕಾರಣ
ಕಾವುದಾನತ ಜಗವ ಗದುಗಿನ ವೀರ ನಾರಯಣ

ಕುಮಾರವ್ಯಾಸ

ಅಭಿನಂದನೆಗಳು

# ಎಂ. ಜಿ. ಬಿ.

ಸರಕು ಸಾಗಾಣಿಕೆಯ ಅತ್ಯುತ್ತಮ ಮಾಧ್ಯಮ

## ಎಂ. ಜಿ. ಬ್ರದರ್ಸ್ ಲಾರೀ ಸರ್ವೀಸ್

ಯೆಮ್ಮಿಗನೂರು 518 360, ಕರ್ನೂಲು ಜಿಲ್ಲೆ, ಆಂಧ್ರಪ್ರದೇಶ.

**ತಂತಿ : ಆಟೋಸರ್ವೀಸ್ ಟೆಲೆಕ್ಸ್ : 0816-222- ಫೋನ್ : 4, 57, 79, 157.**

**ಆಂಧ್ರಪ್ರದೇಶ, ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು, ಒರಿಸ್ಸಾ, ಗುಜರಾತ್, ದೆಹಲಿ, ಹರ್ಯಾನ, ಉತ್ತರಪ್ರದೇಶಗಳಿಗೆ ದೈನಂದಿನ ಸರಕು ಸಾಗಾಣಿಕೆ**

**ಜೊತೆಗೆ**

**ಭಾರತಾದ್ಯಂತ ಸಹ ಸಾಗಾಣಿಕೆಯ ವ್ಯವಸ್ಥೆ**

**ವಿಭಾಗ ಕಚೇರಿಗಳು**

ಹೈದರಾಬಾದ್ ಹಾಗೂ ವಿಜಯವಾಡ

**ಪ್ರಾದೇಶಿಕ ಕಚೇರಿಗಳು**

ಬೊಂಬಾಯಿ, ಬೆಂಗಳೂರು, ದೆಹಲಿ, ಸೇಲಂ, ವಿಜಯನಗರಂ.

## ಪ್ರಮುಖ ಸ್ಥಾನಿಕ ಕಚೇರಿಗಳು

| | | | |
|---|---|---|---|
| ಆದೋನಿ | ದಾವಣಗೆರೆ | ಲೂಧಿಯಾನ | ಪಾಣೀಪಟ್ |
| ಅನಂತಪುರ | ಏಲೂರು | ಮಾಧವನಗರ | ಪುಣೆ |
| ಆದಿಲಾಬಾದ್ | ಈರೋಡು | ಮದರಾಸು | ಪ್ರೊದ್ದುಟೂರು |
| ಅಹಮದಾಬಾದ್ | ಫರಿದಾಬಾದ್ | ಮಹಬೂಬ್ ನಗರ್ | ಪಾಂಡಿಚೆರಿ |
| ಬಳ್ಳಾರಿ | ಗಜಿಯಾಬಾದ್ | ಮಂಗಳೂರು | ರಾಜಮಹೇಂದ್ರಿ |
| ಬಿಜಾಪುರ | ಗುಂಟೂರು | ಮಚಲೀಪಟ್ಟಣ | ರಾಯಚೂರು |
| ಬರ್‌ಹಾಂಪುರ | ಗುಂತಕಲ್ | ಮೈಸೂರು | ಸೋಂಪೇಟ್ |
| ಬರೋಡ | ಗುಲ್ಬರ್ಗ | ಮಧುರೈ | ಶೋಲಾಪುರ್ |
| ಬೆಳಗಾಂ | ಹುಬ್ಬಳ್ಳಿ | ಮೋದಿನಗರ್ | ಶಿವಮೊಗ್ಗ |
| ಚಿತ್ತೂರು | ಇಚ್ಚಲಕರಂಜಿ | ಮೀರತ್ | ಸಿಕಂದರಾಬಾದ್ |
| ಕಡಪ | ಜಲಂಧರ್ | ನಂದ್ಯಾಲ್ | ತಿರುಪೂರ್ |
| ಕೊಯಂಬತ್ತೂರು | ಕರ್ನೂಲ್ | ನೆಲ್ಲೂರ್ | ಥಾನಾ |
| ಕಡ್ಡಲೂರು | ಕಾಕಿನಾಡ | ನಿಜಾಮಾಬಾದ್ | ವಿಶಾಖಪಟ್ಟಣಂ |
| ಧಾರವಾಡ | ಕೊಲ್ಹಾಪುರ | ಒಂಗೋಲು | ವೆಲ್ಲೂರ್ |




# ಸಪ್ತಗಿರಿ



ಕನ್ನಡ, ತೆಲುಗು, ತಮಿಳು, ಇಂಗ್ಲೀಷ್,
ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.

ಸಂಪುಟ 11] ಜನವರಿ 1981 [ಸಂಚಿಕೆ 8

**ಬಿಡಿ ಪ್ರತಿ ೫೦ ಪೈಸೆ.**

**ಸಂವತ್ಸರ ಚಂದಾ ೬ ರೂ.**

## ವಿಷಯಸೂಚಿ



ಮುಖಚಿತ್ರ : ಸಂಕ್ರಾಂತಿ ಸ್ತುತಿ ಪಠನ. ಚಿತ್ರ : ಮ. ಶ್ರೀ.

ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್,
ಐ.ಎ.ಎಸ್.,
ಟೆಲಿಫೋನ್ ನಂಬರು: 2322

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.
ಟೆಲಿಫೋನ್ ನಂಬರು; 2254

ಮುದ್ರಣ:
ಯಂ. ವಿಜಯಕುಮಾರ್‌ರೆಡ್ಡಿ
ಮೇನೆಜರ್, ತಿ. ತಿ. ದೇ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು; 2340

ಮಿಕ್ಕ ವಿವರಗಳಿಗೆ:
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

# ವಾರ್ತಾಚಿತ್ರಗಳು



## ತಿರುಪತಿಯಲ್ಲಿ ನೇತ್ರ ಚಿಕಿತ್ಸೆ

14-11-80 ರಿಂದ 22-11-80 ರವರೆಗೆ ತಿರುಪತಿಯಲ್ಲಿ ಉಚಿತ ನೇತ್ರ ಪರೀಕ್ಷೆ, ಶಸ್ತ್ರ ಚಿಕಿತ್ಸೆಗಳು ಯಶಸ್ವಿಯಾಗಿ ಪೂರ್ತಿಗೊಂಡವು. ಶಿಬಿರದಲ್ಲಿ ಒಟ್ಟು 3,528 ಮಂದಿಯ ನೇತ್ರ ಪರೀಕ್ಷೆ ನಡೆದು 333 ಶಸ್ತ್ರ ಚಿಕಿತ್ಸೆಗಳು ನಡೆದವು. ಹೈದರಾಬಾದಿನ ಶ್ರೀ ಸರೋಜಿನೀ ದೇವಿ ನೇತ್ರ ಚಿಕಿತ್ಸಾ ಆಸ್ಪತ್ರೆಯ ಡಾ॥ ಪಿ. ಶಿವಾರೆಡ್ಡಿಯವರ ನೇತೃತ್ವದ ಈ ಶಿಬಿರದಲ್ಲಿನ ನೇತ್ರ ಚಿಕಿತ್ಸೆಯ ಒಂದು ನೋಟ. ಚಿತ್ರದಲ್ಲಿ ತಿ. ತಿ. ದೇ. ವೈದ್ಯಾಧಿಕಾರಿ ಶ್ರೀಮತಿ ವೈ. ಆರ್. ಧನಲಕ್ಷ್ಮಿ ಅವರನ್ನೂ ಕಾಣಬಹುದು.



ನೇತ್ರ ಚಿಕಿತ್ಸಾ ಶಿಬಿರದಲ್ಲಿ ತಿರುಪತಿಯ ರೋಟರಿ ಕ್ಲಬ್‌ನವರು ಶ್ರೀ ವೆಂಕಟೇಶ್ವರ ಕುಷ್ಠ ರೋಗ ನಿವಾರಣಾಕೇಂದ್ರದವರಿಗಾಗಿ ಕನ್ನಡಕಗಳನ್ನು ಉಚಿತವಾಗಿ ನೀಡಿದರು. ಚಿತ್ರದಲ್ಲಿ ಕನ್ನಡಕಗಳನ್ನು ಸ್ವೀಕರಿಸುತ್ತಿರುವ ಡಾ॥ ವೈ. ಆರ್. ಧನಲಕ್ಷ್ಮಿ ಅವರನ್ನೂ ತಿ. ತಿ. ದೇ. ಉಪ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಟಿ. ನಾಯುಡು ಅವರನ್ನೂ ಕಾಣಬಹುದು.

# )ಜಯದಾಸರ ಒಂದು ಪದ

ರಾಗ ಆನಂದ ಭೈರವಿ-ಛಾಪುತಾಳ

)ನಾದರೇನು ಮೋಕ್ಷವಿಲ್ಲ; ಜ್ಞಾನ ವಿಲ್ಲದೆ (ಪ.)

ೇದ ಓದಿದರೇನು ಶಾಸ್ತ್ರ ನೋಡಿದ ರೇನು

ಾದಿ ಕಾದಾಡಿ ಗೆದ್ದರೇನು, ಜ್ಞಾನವಿಲ್ಲದೆ

ಾಶಿಗೆ ಹೋದರೇನು, ಕಾನನ ಸೇರಿದ ರೇನು

ಾಶಿ ಪೀತಾಂಬರ ಉಟ್ಟರೇನು ಜ್ಞಾನ ವಿಲ್ಲದೆ

ಪತಪ ಮಾಡಲೇನು ಜಾಣತನ ಮೆರೆದರೇನು

)ಜಯ ವಿಠಲನ ಸಾರಿದರೇನು, ಜ್ಞಾನ ವಿಲ್ಲದೆ.

ೃಗು ಮಹರ್ಷಿ ಅಂಶ ಸಂಭೂತರಾ ಅಪರೋಕ್ಷ ಜ್ಞಾನಿಗಳಾದ ಶ್ರೀಮತ್ ಯದಾಸರು ತಮ್ಮ ಪದಗಳಲ್ಲೊಂದಾದ ನಾದರೇನು ಮೋಕ್ಷವಿಲ್ಲ ಜ್ಞಾನವಿಲ್ಲದೆ'' ವಿಯಿಂದ ಮೊದಲು ಮಾಡಿದ "ವೇದ ದರೇನು ಶಾಸ್ತ್ರ ನೋಡಿದರೇನು, ಕಾದಿ ಾಡಿ ಗೆದ್ದರೇನು, ಜ್ಞಾನವಿಲ್ಲದೆ'' ುವುದರಲ್ಲಿ ಹರಿಸರ್ವೋತ್ತಮತ್ವ ್ಞನ ಪ್ರಾಧಾನ್ಯವನ್ನು ಪ್ರತಿಪಾದನೆ ಡಿದ್ದಾರೆ. ಈ ಕಲಿಯುಗದಲ್ಲಿ ಅರ್ಥಾತ್ ರೆ ಇಲ್ಲ ಅನ್ನುವವರು ಕೆಲವರು, ಹರಿ ನ್ನು ಮರೆತು ಬ್ರಹ್ಮೇಂದ್ರಾದಿ ದೇವತೆ ದೊಡ್ಡವರೆನ್ನುವವರು ಕೆಲವರು ತ್ತು ಇವೆಲ್ಲವನ್ನು ಅಲ್ಲಗಳೆದು ಕ್ಷುದ್ರ ತಾ ಉಪಾಸನೆ ಮಾಡುವರು ಕೆಲವರು. ಉಪನಿಷತ್ ಮತ್ತು ಪುರಾಣ ಇತಿ ಸಗಳಲ್ಲಿರತಕ್ಕ ಅಂತರಾಳದ, ಮೋಕ್ಷ ನವಮಾರ್ಗದ ಉತ್ತಮ ಜ್ಞಾನದ ್ಗ, ವಿವರಣೆಗಳನ್ನು ವಿವರಿಸುವವರಾರು? ರಿಸುವಂತಿದ್ದರೆ ಅದನ್ನು ಕೇಳುವವರಾರು?

ಾರಾಜನ್ ಜಗತಾ ಪರಂಗುರುಂ।
ಲೋಕನಾಥಾನತಪಾದ ಪಂಕಜಂ।
ಯೇಣ ಮರ್ತ್ಯಾ ಭಗವಂತಮಚ್ಯುತಂ।
ಯಷ್ಯಂತಿ ಪಾಶಂಡ ವಿಭಿನ್ನ ಚೇತಸಃ॥ (೧–೩–೪೩)

ಎಂದು ಭಾಗವತದಲ್ಲಿ ಹೇಳುವಂತೆ ಈ ಕ್ಷುದ್ರವಾದ ಕಲಿಯುಗದಲ್ಲಿ ಸ್ವಾರ್ಥ ಸಾಧನೆಯನ್ನೇ ಗುರಿಯನ್ನಾಗಿಟ್ಟು ಕೊಂಡು ಎಲ್ಲಿ ನೋಡಿದರೂ ಪಾಶಂಡ ಮತ ಗಳಿಂದ ಪ್ರಭಾವಿತರಾದ ಜನರು ಜಗದ್ರಕ್ಷಕ ನಾದ ಆ ಶ್ರೀಹರಿಯನ್ನು ಸ್ಮರಣೆಗೂ ತಾರದೆ ಉನ್ಮತ್ತ ಮನಸ್ಕರಾಗಿ ಮೇಲೆ ಕಪಟ ವೇಷ ದಿಂದ ಭಕ್ತರಂತೆ ಪಂಡಿತರಂತೆ ನಟನೆ ಮಾಡುತ್ತಾರೆ. ಹೀಗಿರುವಲ್ಲಿ ಬೇಕಾದಷ್ಟು ಶಾಸ್ತ್ರಾಭ್ಯಾಸ ಮಾಡಿ ಪರಮಾತ್ಮನನ್ನು ಪೂಜಿಸುವ ಬಗೆಯಲ್ಲಿ ನಿರಂತರ ಭಕ್ತಿ ಮಾಡುವ ವಿಧಾನವನ್ನರಿಯದೆ ತಾನೇ ಪಂಡಿತನೆಂದುಕೊಳ್ಳುವವರಿಗೆ ಜ್ಞಾನ ವೆಲ್ಲಿಂದ ಬರಬೇಕು ? ಉತ್ತಮ ಜ್ಞಾನ ಬರಬೇಕಾದರೆ ಪ್ರತಿಕ್ಷಣದಲ್ಲೂ ಮಾನವನ ನರನರದಲ್ಲೂ ಶ್ರೀಹರಿ ಶ್ರೀಹರಿ ಅನ್ನುವ ಪದ ಸಂಚರಿಸುತ್ತಿರಬೇಕು. ಯಾವನು ಶ್ರೀಹರಿ ಯನ್ನು ತನ್ನ ಯೋಗ್ಯತೆಯಂತೆ ಅರ್ಥ ಮಾಡಿಕೊಳ್ಳುತ್ತಾನೊ ಅವನು ಮಾತ್ರ ಜ್ಞಾನಿಯಾಗಿ ಅವನಿಗೆ ಮೋಕ್ಷದ ಮಾರ್ಗವು ಸುಗಮವಾಗಿ ದೊರಕುತ್ತದೆಂಬುದರಲ್ಲಿ ಸಂಶಯವಿಲ್ಲ ಜ್ಞಾನೇನೈವ ಪರಮಂ ಪದಂ. (ಅ-ಭಾ-ಅ. –3) ಅಂದರೆ ಜ್ಞಾನದಿಂದಲೇ ಮೋಕ್ಷವು) ಎಂಬುದು ನಿರ್ವಿವಾದ.

ವೇದ ಓದಿದರೇನು, ಶಾಸ್ತ್ರ ನೋಡಿದ ರೇನು,
ಕಾದಿ ಕಾದಾಡಿ ಗೆದ್ದರೇನು, ಜ್ಞಾನ ವಿಲ್ಲದೆ.

ಪೂರ್ವ ಜನ್ಮದ ಕಿಂಚಿತ್ ಪುಣ್ಯಫಲದ ನಿಮಿತ್ತ ಈ ಜನ್ಮದಲ್ಲಿ ಮಾನವನಾಗಿ ಜನಿಸಿ ಶಾಸ್ತ್ರಾಭ್ಯಾಸವನ್ನು ಮಾಡುವ ಒಂದು ವಿಶೇಷ ಪುಣ್ಯ ನಮ್ಮದಾಗುತ್ತದೆ. ವೇದಾ ಭ್ಯಾಸವನ್ನು, ಶಾಸ್ತ್ರಾಭ್ಯಾಸವನ್ನು ಮಾಡಲು ಮೊದಲು ನಾವು ಸದಾಚಾರ ಸಂ ಪನ್ನರಾಗಿರಬೇಕು, ಎಲ್ಲಕಿಂತ ಮೊದಲು ಹರಿ ಸರ್ವೋತ್ತಮ ವಾಯು ಜೀವೋತ್ತಮ ಅನ್ನುವ ಪದದರ್ಥವನ್ನು ಮೊದಲು ಅರಿತು ತಾರತಮ್ಯ ಪಂಚಭೇದವನ್ನು ತಿಳಿದು ಪರ ಮಾತ್ಮನ ಆರಾಧನೆಯ ಕ್ರಮವನ್ನು ಅರಗಿಸಿ ಕೊಂಡು ನಂತರ ನಿರಂತರ ವೇದ ಉಪ ನಿಷತ್ತುಗಳನ್ನು ಶಾಸ್ತ್ರಪುರಾಣಾದಿ ಗ್ರಂಥ



**ಕೆ. ಮೋಹನ್ ರಾವ್**

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಗಳನ್ನು ಹರಿಕೀರ್ತನ ನಾಮಾದಿಗಳನ್ನು ಕಾಮ ಕಳಂಕರಹಿತರಾಗಿ, ಸದಾಚಾರ ಸಂಪನ್ನರಾಗಿ ಅನನ್ಯಶಾಸ್ತ್ರ ವೇದಭ್ಯಾಸಗಳನ್ನು ಮಾಡಿಕೊಂಡಿರತಕ್ಕಂಥ ಉದ್ದಾಮ ಪಂಡಿತರಲ್ಲಿ ವ್ಯಾಸಂಗ ಮಾಡಿದಲ್ಲಿ ಅನ್ಯಥಾ ಜ್ಞಾನವಿಲ್ಲದೆ ಸುಜ್ಞಾನವು ಒದಗಿ ಶ್ರೀ ಹರಿಯಲ್ಲಿ ನಿರಂತರವಾದ ಭಕ್ತಿಯು ಒದಗುತ್ತದೆ. ಅಂಥವರಿಗೆ ಮೋಕ್ಷ ಸಾಧನಕ್ಕೆ ಅನುಕೂಲವಾಗಿರುವುದೇ ಹೊರತು, ಅರ್ಥಕಾಮ ವಿಷಯ ವಾಸನೆಗಳಿಂದ ಚಿಂತಿತನಾಗಿ ಶ್ರೀಹರಿಸರ್ವೋತ್ತಮತ್ವವನ್ನು ತಿಳಿಯದೆ ನಿರಂತರ ವೇದಪಾರಾಯಣಾದಿಗಳಲ್ಲಿ ಮನಸ್ಸಿಟ್ಟು ಶಾಸ್ತ್ರಾಭ್ಯಾಸ ಮಾಡಿದರೂ ಉದರಂಭಣದ ಜ್ಞಾನ ಬರುವುದೇ ಹೊರತು, ಉತ್ತಮವಾದ ಮೋಕ್ಷಸಾಧನಾ ಜ್ಞಾನವು ಅವರ ಹತ್ತಿರವೂ ಸುಳಿಯುವುದಿಲ್ಲ. ಅದನ್ನೇ ಶ್ರೀಹರಿಕಥಾಮೃತಸಾರದಲ್ಲಿ "ವೇದಶಾಸ್ತ್ರ ಪುರಾಣ ಕಥೆಗಳ | ಓದಿ ಕೇಳಿದರೇನು ಸಕಲ ನಿಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು|| ಓದನಂಗಳನು ಜರಿದು ಶ್ವಾಸನಿರೋಧಗೈಸಿದರೇನು ಕಾಮ | ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನ || (ಹ. ಕ. ಸಾ. ಸಂಧಿ ೧೦ ಪದ್ಯ ೭೬) ಎಂದು ಹೇಳಿರುತ್ತಾರೆ. ನಾವು ಮಾಡುವ ಅಧ್ಯಯನ ಪ್ರವಚನಗಳು ಶ್ರೀ ಹರಿಯ ಪ್ರೀತಿಯನ್ನು ಸಂಪಾದಿಸಿ ಕೊಡುವಂತಿರಬೇಕು. ಅಟ್ಟಹಾಸದಿಂದ ಮೆರೆಯುವುದಕ್ಕಲ್ಲ. ಡಾಂಭಿಕತನದ ಅಧ್ಯಯನಕ್ಕೂ ಅವನು ಒಲಿಯಲಾರನು. ಅದಕ್ಕೆ ತಾತ್ಪರ್ಯ ನಿರ್ಣಯದಲ್ಲಿ "ನಾಮಮಾತ್ಮಾ ಪ್ರವಚನೇನಲಭ್ಯಃ" ಎಂಬ ಭಗವದ್ವಾಕ್ಯವನ್ನು ಉದ್ಧರಿಸಿರುತ್ತಾರೆ. ಕೇವಲ ಶಾಸ್ತ್ರಪ್ರವಚನ ಮಾಡಿ ಬಿಟ್ಟ ಮಾತ್ರಕ್ಕೆ ನಾನು ಒಲಿಯುವುದಿಲ್ಲ ಎಂದು ಶ್ರೀಹರಿಯು ನುಡಿದ ವಾಕ್ಯ ಇದಾಗಿದೆ. ಕಷ್ಟಪಟ್ಟು ವೇದ ಉಪನಿಷತ್ತುಗಳನ್ನು ಓದಿ ಶಾಸ್ತ್ರಾಭ್ಯಾಸ ಮಾಡಿ "ನಾಹಂ ಕರ್ತ ಹರಿಕರ್ತ" ಎಂದರೆ ನನ್ನದೇನಿಲ್ಲ ಎಲ್ಲವೂ ಆ ಶ್ರೀಹರಿಯ ಅನುಗ್ರಹ ಎನ್ನುವ ಮನೋಮಾರ್ಗ ತಿಳಿಯಬೇಕಾಗಿದೆ. ಆ ಪುರಾಣದ ಅರ್ಥ ನಾನು ಬರೆದದ್ದು, ಈ ಉಪನ್ಯಾಸದಲ್ಲಿ ನಾನು ಹೀಗೆ ಹೇಳಿದೆ ಗೊತ್ತೇ ಇತ್ಯಾದಿಯಾಗಿ ಹೇಳುತ್ತ ಅಹಂಕಾರದಿಂದ ಎಷ್ಟು ಪಂಡಿತರ ಹತ್ತಿರ ವಾದ ಮಾಡಿ ಗೆದ್ದರೂ ಪ್ರಯೋಜನವಿಲ್ಲ. "ಬಾಯಿ ಇದ್ದವರು ಬರಪಲ್ಲಿ ಗೆದ್ದರು" ಅನ್ನುವ ಹಾಗಾಗುತ್ತದೆಯೇ ಹೊರತು, ಅವರಿಂದ ಯಾರಿಗೂ ಪ್ರಯೋಜನವಿಲ್ಲ. ನಾವು ಉತ್ತಮಮಾರ್ಗಿಗಳಾಗಿರುವುದಲ್ಲದೆ ಇತರರನ್ನೂ ಉತ್ತಮ ಮಾರ್ಗಿಗಳನ್ನಾಗಿ ಮಾಡುವುದು ಉತ್ತಮರ ಕೆಲಸ. ಬರಿ ಹುರುಳಿಲ್ಲದ ವಾದದಲ್ಲಿ ಗೆದ್ದು ಇತರರನ್ನೂ ದುರ್ಮಾರ್ಗಕ್ಕೆಳೆಯುವಂಥ ಪಂಡಿತರಿಗಲ್ಲ ಮೋಕ್ಷದ ದಾರಿ. ಉತ್ತಮ ಜ್ಞಾನ ಹೇಗೆ ಎಂಬುದೇ ದಾಸರಾಯರ ಪದದ ಅರ್ಥವು. ಅದಕ್ಕೆ ಶ್ರೀ ಪುರಂದರದಾಸರು "ಶ್ರೀನಿವಾಸನು ಒಲಿಯನು ಕೇಳೋ | ಜ್ಞಾನೋಪಾರ್ಜನೆ ಮಾಡದಲೆ || ಏನೇನು ಮಾಡುವ ಸತ್ಕರ್ಮವು ಶ್ರೀ|ಪಾಣೇಶಾರ್ಪಣವೆನ್ನದಲೆ|| (ಪ.) ಎಂದು ಹಾಡಿರುತ್ತಾರೆ.

ಕಾಶಿಗೆ ಹೋದರೇನು, ಕಾನನ ಸೇರಿದರೇನು
ಕಾಶಿ ಪೀತಾಂಬರ ಉಟ್ಟರೇನು, ಜ್ಞಾನವಿಲ್ಲದೆ

"ಅರ್ಥವಿಲ್ಲದ ಕಾರ್ಯ ವ್ಯರ್ಥ" ಎಂಬ ನಾಣ್ಣುಡಿಯಂತೆ ನಾವು ಎಷ್ಟೇ ತೀರ್ಥ ಕ್ಷೇತ್ರಗಳನ್ನು ಸುತ್ತಿ ಬಂದರೂ ಅದರಿಂದ ಸ್ವಲ್ಪವೂ ಪುಣ್ಯ ವಿಶೇಷಗಳು ಲಭಿಸುವುದಿಲ್ಲ. ಯಾಕೆಂದರೆ ಬರಿ ತೀರ್ಥ ಸ್ನಾನ, ಕ್ಷೇತ್ರದರ್ಶನ ಮಾಡಿದ ಮಾತ್ರಕ್ಕೆ ಮೋಕ್ಷ ಲಭಿಸುವುದಾದರೆ ನಿರಂತರವೂ ಆಯಾ ನದಿಗಳಲ್ಲಿಯೇ ವಾಸ ಮಾಡುತ್ತಿರುವ ಜಲಚರಗಳಿಗೆ ಮೋಕ್ಷವೇಕಾಗಬಾರದು? ಸದಾ ಕ್ಷೇತ್ರಗಳಲ್ಲೆ ವಾಸ ಮಾಡುತ್ತಿರ ಬಹುದಾದ ಚೋರರಿಗೆ ಯಾಕೆ ಸ್ವರ್ಗಪ್ರಾಪ್ತಿಯಾಗಬಾರದು? ಅಂದರೆ ತೀರ್ಥಕ್ಷೇತ್ರಗಳ ದರ್ಶನವು ಜ್ಞಾನಾರ್ಜನೆಯಲ್ಲಿ ಪರ್ಯವಸಾನವಾಗದಿದ್ದಲ್ಲಿ ಅದು ಪ್ರಯೋಜನವಿಲ್ಲದ್ದು ಎಂದು ತಾತ್ಪರ್ಯ. ಅದನ್ನು ಶ್ರೀ ಮದಾಚಾರ್ಯರು "ಕಿಂತಸ್ಯದಾನೈಃ ಕಿಂತೀರ್ಥೈಃ ಕಿಂತಪೋಭಿಃ ಮಧ್ವರೈಃ|| ಯೋನಿತ್ಯಂ ಧ್ಯಾಯತೇ ದೇವಂ ನಾರಾಯಣ ಮನನ್ಯಧೀಃ|| (ಕೃ-ಮಹಾರ್ಣವ.) (ಶ್ಲೋ೧೮೯)

ಎಂದರೆ ಶ್ರೀಹರಿಯನ್ನು ಧ್ಯಾನಿಸುತ್ತಿರುವವನಿಗೆ ದಾನ, ತೀರ್ಥಯಾತ್ರೆ, ತಪಸ್ಸು ಯಜ್ಞಯಾಗಾದಿ ಕರ್ಮಗಳಿಂದಾದರೂ ಏನು ಪ್ರಯೋಜನ? ಇವುಗಳೆಲ್ಲವನ್ನೂ ಮಾಡುವ ಉದ್ದೇಶವೂ ಶ್ರೀಹರಿಯ ಜ್ಞಾನವನ್ನು ಸಂಪಾದಿಸಲೋಸುಗವೇ. ಈ ಜ್ಞಾನವಿಲ್ಲದೆ ಏನು ಮಾಡಿದರೂ ವ್ಯರ್ಥವೇ ಸರಿ. ಅದಕ್ಕೆ ಶ್ರೀ ಜಗನ್ನಾಥ ದಾಸರು ಆವ ಕ್ಷೇತ್ರಕೆ ಪೋದರೇನಿ| ನ್ನಾವ ತೀರ್ಥದಿ ಮುಳುಗಲೇನಿ| ನ್ನಾವ ಜಪತಪ ಹೋಮ ದಾನವ ಮಾಡಿ ಫಲವೇನು|| ಶ್ರೀವರ ಜಗನ್ನಾಥ ವಿಠಲನು| ಈ ವಿಧದಿ ಜಂಗಮಸ್ಥಾವರಲಿ ಪರಿಪೂರ್ಣನೆಂದರಿಯದಿಹ ಮಾನವನು|| [ಹ.ಕ.ಸಾ. ಸಂಧಿ ೧೧ ಪದ ೪೩||.] ಎಂದಿರುತ್ತಾರೆ. ಆದರೆ ಜ್ಞಾನಿಯಾದವನಿಗೆ ಮೇದಿನಿಯ ಮೇಲುಳ್ಳ ಗೋಷ್ಪಾ| ದೋದಕಗಳೆಲ್ಲಮಲತೀರ್ಥವು| ಪಾದಪಾದ್ರಿಧರಾತಳವೆ ಸುಕ್ಷೇತ್ರ ಜೀವಗಣ| ಶ್ರೀದನ ಪ್ರತಿಮೆಗಳು ಅವರು ಬೋಧನವೆ ನೈವೇದ್ಯವಿತ್ಯದಿ| ಹಾಡಿನಡೆವುದೆ ನರ್ತನಗಳೆಂದರಿತವನೆ ಯೋಗಿ|| (ಹ. ಕ. ಸಾ. ಸಂಧಿ ೧೦ ಪದ್ಯ ೩.)

ಸರ್ವದೇಶವು ಪುಣ್ಯದೇಶವು | ಸರ್ವಕಾಲವು ಪರ್ವಕಾಲವು | ಸರ್ವಜೀವರು ದಾನಪಾತ್ರರು ಮೂರುಲೋಕದೊಳು | ಸರ್ವ ಮಾತುಗಳೆಲ್ಲ ಮಂತ್ರವು | ಸರ್ವ ಕೆಲಸಗಳೆಲ್ಲ ಪೂಜೆಯು| ಶರ್ವ ವಂದ್ಯನ ವಿಮಲ ಮೂರ್ತಿ ಧ್ಯಾನ ಉಳ್ಳವಗೆ|| (ಹ. ಕ. ಸಾ. ಸಂಧಿ ೧೦ ಪದ್ಯ ೪) ಹೀಗೆ ಅನುಸಂಧಾನವನ್ನು ಪಡೆದ ಜ್ಞಾನಿಗಳಿಗೆ ಎಲ್ಲಿದ್ದರೂ ಅದೇ ಸಾಧನ ಕ್ಷೇತ್ರವು. ನಾವು ಮಾಡುವ ತೀರ್ಥ ಕ್ಷೇತ್ರ ಸಂದರ್ಶನದ ಉದ್ದೇಶ ಸ್ಥಳ ಮಹಾತ್ಮೆಯನ್ನು ತಿಳಿದುಕೊಂಡು ಅದರಂತೆ ಅಲ್ಲಿ ನಡೆದುಕೊಂಡು ಭಗದ್ಭಕ್ತರ ಅಂದರೆ ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸಲು ಹೊರಟಿರತಕ್ಕಂಥ ಮಹಾ ಮಹಾಪಂಡಿತರ ದರ್ಶನದಿಂದ ಆ ಪರಮಾತ್ಮನನ್ನೇ ಕಂಡೆವು ಎಂಬ ಮನೋದಾರ್ಢ್ಯದಿಂದ ಕ್ಷೇತ್ರದ ದೇವರದರುಶನ ಮಾಡಿದಾಗ ಬರುವ ಪುಣ್ಯ ವಿಶೇಷದಿಂದ ಉತ್ತಮ ಜ್ಞಾನಮಾರ್ಗಕ್ಕೆ ಸಾಧನ. ಅದನ್ನು ಬಿಟ್ಟು ಹೆಂಡತಿ ಮಕ್ಕಳ ಸಮೇತ ವಿಹಾರಾರ್ಥವಾಗಿ ಕಾಶಿ ಮೊದಲಾದ ದಿವ್ಯಕ್ಷೇತ್ರಗಳಲ್ಲಿಗೆ ಹೋಗಿ ಬಂದರೆ ಅದರಿಂದಾಗುವ ಪ್ರಯೋಜನವಾದರೂ ಏನು? ಎಂಬುದು ಈ ಪದದರ್ಥ.

"ಕಾನನ ಸೇರಿದರೇನು" ಎಂದು ಶ್ರೀ ವಿಜಯದಾಸರು ಹೇಳಿರುವ ಉದ್ದೇಶವೆಂದರೆ ಬಹು ಜನರು ಕಾಡಿನಲ್ಲಿ ಕುಳಿತು ತಪಸನ್ನಾಚರಿಸಿದರೆ ಮುಕ್ತಿಯಾಗುತ್ತದೆಂದು ತಿಳಿದು ಕಾಡನ್ನು ಸೇರುತ್ತಾರೆ, ಆದರೆ ಅಜಿತೇಂದ್ರಿಯನಾಗಿ ಮನಸ್ಸನ್ನು ವಿಷಯದಲ್ಲೇ ಚಿಂತಿಸಲು ಬಿಟ್ಟು ಯಾವ ಕಾಡಿಗೆ ಹೋದರೂ ಏನು ಸುಖ? ಇದನ್ನು ಭಾಗವತದಲ್ಲಿ "ಭಯಂ ಪ್ರಮತ್ತಸ್ಯ ವನೇಷ್ವಪಿಸ್ಯಾತ್ | ಯತೋ ವಸಂತೇ ಸಹಷಟ್ ಸಪತ್ನಾಃ | ಜಿತೇಂದ್ರಿಯಸ್ಯಾತ್ಮರತೇ ಬುಧಸ್ಯ | ಗೃಹಾಶ್ರಮ ಕಿಂನ್ನು ಕರೋತ್ಯವದ್ಯಂ || (೫-೧-೧೭)" ಹೀಗೆಂದು ಹೇಳಿರುತ್ತಾರೆ. ಅಜಿತೇಂದ್ರಿಯರಾಗಿ, ಅರಿಷಡ್ವರ್ಗದಿಂದ ಪೀಡಿತರಾಗಿ ನಾವು ಕಾಡಿಗೆ ಹೋದರೆ ಮನಸ್ಸಿಗೆ ನೆಮ್ಮದಿ ಸಿಕ್ಕುತ್ತದೆ ಎಂಬುದೊಂದು ಭ್ರಾಂತಿ, ತಪಸ್ಸು ಮಾಡಿದರೆ ಪುಣ್ಯ ಸಂಪಾದನೆ ಮಾಡಬಹುದೆಂದು ಮತ್ತೊಂದು ಭ್ರಾಂತಿ. ಇದನ್ನು ಸರಿಯಾಗಿ ತಿಳಿಯದೆ ಸಂಸಾರ ತ್ಯಜಿಸಿ ತನ್ನ ಮೇಲಿರತಕ್ಕ ಹೆಂಡಿರು ಮಕ್ಕಳ ಜವಾಬ್ದಾರಿಯನ್ನ ಬೇಜವಾಬ್ದಾರಿಯಿಂದ ತೊರೆದು ಕಾಡಿಗೆ ಹೋಗಿ ಕುಳಿತು ತಪಸ್ಸು ಮಾಡಿದರೆ ಹೇಗೆ ಪುಣ್ಯ ಬರುತ್ತದೆ? ಒಳ್ಳೆಯ ಜ್ಞಾನವಿಲ್ಲದೆ ಮುಕುತಿಗೆ ಹೇಗೆ ಸಾಧನವಾಗುತ್ತದೆ?

ಜಪತಪ ಮಾಡಲೇನು, ಜಾಣತನ ಮೆರೆದರೇನು,
ವಿಜಯ ವಿಠಲನ ಸಾರಿದರೇನು, ಜ್ಞಾನವಿಲ್ಲದೆ (೩) (ಶ್ರೀ)

ಇನ್ನು ಜಪ ತಪ ಮಾಡುತ್ತೇನೆಂಬ ಅಹಂಕಾರದಿಂದ ಮೆರೆಯುವ ಜನರನ್ನು ನೋಡಿ ಶ್ರೀ ವಿಜಯದಾಸರು ಹೇಳುತ್ತಾರೆ, ಜಪ ಮಾಡುತ್ತ ದೇವರ ಮುಂದೆ ಕುಳಿತಿರುವುದು ಪಟಪಟ ಉದುರುತ್ತಿರುವ ಮಂತ್ರ ಬಾಯಿಂದ, ಆದರೆ ಮನಸ್ಸು ಮಾತ್ರ ಮತ್ತೊಂದೆಡೆ, ಕೂತರೆ ಕೂತೇ ಬಿಡುವುದು ಬೇರೆಲ್ಲವನ್ನು ಮರೆತು, ಆದರೆ ಮನಸ್ಸಿನ ಗುರಿ ಮಾತ್ರ ತಾರತಮ್ಯದಲ್ಲಿರುವುದಿಲ್ಲ, ಇಂಥವರನ್ನು ನೋಡಿ ಶ್ರೀ ಪುರಂದರದಾಸರು ಹೇಳುತ್ತಾರೆ. "ಉದರವೈರಾಗ್ಯವಿದು| ನಮ್ಮ ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ ||ಪ|| ಕರದಲ್ಲಿ ಜಪಮಣಿ ಬಾಯಲಿ ಮಂತ್ರವು| ಅರವಿಯ ಮುಸುಕನು ಮೋರೆಗೆ ಹಾಕಿ| ಪರಿಸತಿಯರ ಗುಣ ಮನದಲಿ ಸ್ಮರಿಸುತ| ಪರಮ ವೈರಾಗ್ಯ ಸುಶೀಲಿ ಎಂದೆನಿಸುವುದು" ಎಂದು ಹೀಗೆ ಒಳ್ಳೆಯ ಜ್ಞಾನವಿಲ್ಲದೆ ಬರೀ ದೇಹವನ್ನು ದಣಿಸಿದರೆ ಮುಕುತಿಗೆ ಮಾರ್ಗವೆಲ್ಲಿಂದ ಬರಬೇಕು? ನಾನೊಬ್ಬ ಪಂಡಿತನೆಂಬ ಅಹಂಭಾವದಿಂದ ಬರೀ ಅಲಂಕಾರ ವಿದ್ಯಾರ್ಥಿಯಂತೆ ಕೆಲಸಕ್ಕೆ ಬಾರದ ವಿದ್ಯೆಯನ್ನು ಕಲಿತು ಉತ್ತಮ ಮಾರ್ಗದ ದಾರಿ ತಿಳಿಯದೆ (ತಿಳಿದಂತೆ) ಬೂಟಾಟಿಕೆಯಿಂದ ಕಾಲ ಕಳೆಯುವವನಿಗೆ ಹೇಗೆ ದೊರಕಬೇಕು ಮಾರ್ಗ ಮುಕುತಿಗೆ? ಬಾಯಿಗೆ ಬಂದಂತೆಲ್ಲ ಹರಟುತ್ತ ಪರಮಾತ್ಮನನ್ನು ಕೊಂಡಾಡುತ್ತೇನೆಂದು ಸೋಗು ಹಾಕಿಕೊಂಡು ಶ್ರೀ ವಿಜಯ ವಿಠಲ ಎಂದು ಸಾರುತ್ತಿದ್ದರೆ ಉತ್ತಮವಾದ ಜ್ಞಾನ ಮಾರ್ಗವು ಅದಕ್ಕೆ ಫಲರೂಪವಾದ ಮುಕುತಿಯು ದೊರೆಯುವುದಾದರೂ ಹೇಗೆ? ಇಲ್ಲವೆಂಪರ್ಥ. ಸದಾ ನಿರಸ್ತಕುಹಕರಾದವರಿಗೆ ಮತ್ತು ನಿರ್ಮತ್ಸರರಾದವರಿಗೆ ಮಾತ್ರ ಶ್ರೀಹರಿಕೃಪೆ, ಜ್ಞಾನ, ಭಕ್ತಿ ವೈರಾಗ್ಯ ಮತ್ತು ಮೋಕ್ಷಗಳು ಪ್ರಾಪ್ತಿಯಾಗುವುದೇ ಹೊರತು ಇತರರಿಗೆ ಸಾಧ್ಯವೇ ಇಲ್ಲ.

ಅಲ್ಲದೆ ಬಹು ಬೆಲೆ ಬಾಳುವ ಕಾಶಿ ಪೀತಾಂಬರವನ್ನು ಕೊಂಡು ಉಟ್ಟರೆ ಬರಲಿಲ್ಲ ಭಾಗ್ಯ. ಕೊಂಡ ಆ ಪೀತಾಂಬರ ಮೊದಲು ದೇವರಿಗೆ ಉಡಿಸಿ ಹರಿ ಪ್ರೀತಿಯಾಯಿತು ಎಂಬುವ ಉತ್ತಮ ಜ್ಞಾನ ಮೊದಲು ನಮಗೆ ಬರಬೇಕು ನಂತರ ನಾವು ಉಟ್ಟಾಗಲೂ ದೇವರಿಗೆ ಈ ವಸ್ತ್ರವನ್ನು ಉಡಿಸುತ್ತಿರುವುದು ಎಂಬ ಚಿಂತನೆಯಿಂದ ನಾವು ಉಟ್ಟರೆ ಆಗ ನಿಜಕ್ಕೂ ಪರಮಾತ್ಮ ತೃಪ್ತನಾಗುವುದು. ಅದಿಲ್ಲದೆ ಸುಮ್ಮನೆ ಕಾಶಿ ಪೀತಾಂಬರ ಉಟ್ಟರೆ ಸಿಗುವುದೆ ಮೋಕ್ಷ ಎಂಬುದೇ ದಾಸರ ಪದದ ಒಕ್ಕಣೆ. ಈ ಸಂಸಾರವೆಂಬ ಸಾಗರದ ಬಂಧನದಿಂದ ಮುಕ್ತನಾಗಬೇಕಾದರೆ ಜ್ಞಾನ, ಭಕ್ತಿ, ವೈರಾಗ್ಯಗಳು ಮುಖ್ಯವಾಗಿ ಇರಬೇಕು. ಆ ಜ್ಞಾನ ಸಂಪಾದನೆಗಾಗಿ ಎಂಥೆಂಥ ಮಹಾನುಭಾವರು ಎಷ್ಟೆಷ್ಟು ಕಷ್ಟಪಟ್ಟಿದ್ದಾರೆ. ಶ್ರೀ ಪುರಂದರ ದಾಸರು ಸೀನಪ್ಪ ನಾಯಕನೆಂದು ಕರೆಸಿಕೊಳ್ಳುತ್ತಿದ್ದಾಗ ಇದ್ದ ದರ್ಪ ಹೇಗೆ ಮಾಯವಾಗಿ ಇದ್ದ ಸರ್ವಸ್ವವನ್ನೆಲ್ಲ ದಾನಮಾಡಿ ನಿಸ್ವಾರ್ಥತೆಯಿಂದ ಪರಮಾತ್ಮನ ದಾರಿಯನ್ನು ಹುಡುಕುತ್ತ. ಹಾಡುತ್ತ ಕುಣಿಯುತ್ತ ಸಂತೋಷವಾಗಿ ನಿಜವಾದ ವೈರಾಗ್ಯವನ್ನು ಹೊಂದಿ ಸುಜ್ಞಾನವನ್ನು ಸಂಪಾದಿಸಿಕೊಂಡರು. ಅವರೇನು ಸಾಮಾನ್ಯ ಪುರುಷರೆ? ನಾರದಾಂಶ ಸಂಭೂತರು; ಅಂಥಾ ಮಹಾನುಭಾವರ ದಾರಿಯನ್ನು ನಾವು ಅಲ್ಪವಾದರೂ ತಿಳಿಯಲು ಪ್ರಯತ್ನಪಡಲೆಂದೇ ಈ ಜನ್ಮ ನಮಗೆ ಬಂದಿರುವುದು.

**ಸಾರಾಂಶ :-** ಹರಿಸರ್ವೋತ್ತಮತ್ವ ಜ್ಞಾನವನ್ನು ಸರಿಯಾಗಿ ತಿಳಿಯದೆ ಪರಮಾತ್ಮನಲ್ಲಿ ಅನ್ಯಥಾಜ್ಞಾನವನ್ನು ಹೊಂದಿ ಅದನ್ನೇ ಬೆಳೆಸಿಕೊಳ್ಳುತ್ತ ಯಾವ ಪುರಾಣ ಪುಣ್ಯ ಕಥೆಗಳನ್ನು ಎಷ್ಟು ಶಾಸ್ತ್ರವಿಚಾರವನ್ನು ತಿಳಿದುಕೊಂಡಿದ್ದರೂ ಯಾವ ವಿಚಾರದಲ್ಲಿಯೂ ಎಷ್ಟು ವಾಗ್ವಾದಗಳನ್ನು ಮಾಡಿದ್ದರೂ ಯಥಾರ್ಥ ಜ್ಞಾನದಿಂದ ಕಾಶಿ ಮೊದಲಾದ ತೀರ್ಥ ಕ್ಷೇತ್ರಗಳನ್ನು ಎಷ್ಟು ಸಾರಿ ಸುತ್ತಿಬಂದರೂ ಕಾಡಿನಲ್ಲೇ ನಿರಂತರ ತಪಸ್ಸನ್ನು ಕೈಕೊಂಡರೂ ಕಾಶಿ ಪೀತಾಂಬರ ಮೊದಲಾದ ಜರೀ ಶಾಲುಗಳನ್ನು ಉಟ್ಟು, ಹೊದ್ದರೂ ತಾರತಮ್ಯವಿಲ್ಲದ ಜ್ಞಾನದಿಂದ ಸತತ ಜಪತಪಗಳನ್ನು ಮಾಡುತ್ತ ಕಪಟ ವೇಶದಿಂದ ಸೋಗು ಹಾಕಿಕೊಂಡು ಶ್ರೀ ವಿಜಯ ವಿಠಲ ಎಂದರೇನು ಎನ್ನುವ ಜ್ಞಾನವೂ ಇಲ್ಲದೆ – ಶ್ರೀ ವಿಜಯ ವಿಠಲ ಎಂಬುದಾಗಿ ಪ್ರಚುರಿಸುತ್ತಿದ್ದರೆ ದೊರಕುವುದಾದರೂ ಹೇಗೆ ಮುಕುತಿ.

॥ ಶ್ರೀ ಲಕ್ಷ್ಮೀನರಸಿಂಹ ಪ್ರಿಯತೋ ವರದೋ ಭವತು ॥

" ಶ್ರೀ ಕೃಷ್ಣಾರ್ಪಣಮಸ್ತು "

* * *

ಶ್ರೀ ಪದ್ಮಾವತೀ



ದೇವಾಲಯ

ಅರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಅರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ವಿನಯ ಪತ್ರಿಕೆ

ನನ್ನ ಗ್ರಂಥಗಳು ಜನರ ಮೇಲೆ ಸತ್ಪರಿಣಾಮ ಬೀರುತ್ತ, ಅವರನ್ನು ಸನ್ಮಾರ್ಗದಲ್ಲಿ ಕರೆದೊಯ್ಯುವುದನ್ನು ಕಂಡು ಯುಗಾಧಿಪತಿಯಾದ ಕಲಿಪುರುಷನಿಗೆ ತುಂಬ ಕೋಪ ಬಂತು. ಆತ ನನ್ನನ್ನು ಹೆದರಿಸಿದ–ಬೆದರಿಸಿದ–ಬಾಯಿಮುಚ್ಚಿಸಲು ಬಹುವಾಗಿ ಪ್ರಯತ್ನಮಾಡಿದ. ನನಗೂ ತುಂಬ ಭಯವೇ ಆಯ್ತು. ಆದರೆ ಮಾರುತಿ ಸ್ವಪ್ನದಲ್ಲಿ ಬಂದು "ಶ್ರೀರಾಮನಿಗೆ ಈ ವಿಚಾರವನ್ನರಿಕೆ ಮಾಡಿಕೋ, ಆತ ನಿನ್ನನ್ನು ರಕ್ಷಿಸುತ್ತಾನೆ. ಭಯಕ್ಕೆ ಕಾರಣವಿಲ್ಲ"– ಎಂದು ಧೈರ್ಯ ಹೇಳಿದ. ಆತನ ಸಲಹೆಯಂತೆ ಪರಮ ಕರುಣಾಳುವಾದ ರಘುರಾಮಚಂದ್ರನಿಗೆ ವಿನಯದಿಂದ ಬರೆದುಕೊಂಡ ಪತ್ರವಿದು—ಎನ್ನುತ್ತಾರೆ ಸಂತ ಶ್ರೇಷ್ಠ ತುಲಸೀದಾಸರು. ಈ ಗ್ರಂಥವೇ ವಿನಯಪತ್ರಿಕೆ.

ಇಲ್ಲಿರುವ ವಿವಿಧ ದೇವತಾಸ್ತೋತ್ರಗಳ ಭಾವ, ಭಾಷೆ–ಶೈಲಿ–ಅಲಂಕಾರ–ಭಕ್ತಿ ಎಲ್ಲವೂ ಪರಮ ರಮಣೀಯವಾಗಿವೆ. ಕವಿಶ್ರೇಷ್ಠನ ದಿವ್ಯವಾಣಿ ಪ್ರಭು ಗುಣಗಾನವಮಾಡಿ ಧನ್ಯವಾಗಿದೆ. ಸಜ್ಜನರ ಅವಗಾಹನೆಗಾಗಿ ಒಂದೆರಡು ಉದಾಹರಣೆ ಕೊಡುವುದು ಬಹುಶಃಅಪ್ರಾಸಂಗಿಕವಾಗಲಾರದು.

ದೇಹಿ ಸತ್ಸಂಗ ನಿಜ ಅಂಗ ಶ್ರೀರಂಗ ಭವಭಂಗ
ಕಾರಣ ಶರಣ ಶೋಕಹಾರೀ ।
ಯೇತು ಭವದಂಘ್ರಿಪಲ್ಲವ ಸಮಾಶ್ರಿತ ಸದಾ
ಭಕ್ತಿರತ ವಿಗತ ಸಂಶಯ ಮುರಾರಿ ॥

ಶ್ರೀ ರಾಮಚಂದ್ರ ಕೃಪಾಳು ಭಜಮನ ಹರಣ
ಭವಭಯದಾರುಣಂ
ನವ ಕಂಜಲೋಚನ ಕಂಜ ಮುಖ ಕರಕಂಜ
ಪದಕಂಜಾರುಣಂ ॥

ಜಾನಕೀನಾಥ ರಘುನಾಥ ರಾಗಾದಿತಮತ-
ರಣಿತಾರುಣ್ಯತನು ತೇಜಧಾಮಂ
ಸಚ್ಚಿದಾನಂದ ಆನಂದ ಕಂದಾಕರಂ ವಿಶ್ವ
ವಿಶ್ರಾಮ ರಾಮಾಭಿರಾಮಂ ॥

ಶಂಕರಂ ಶಂಪ್ರದಂ ಸಜನಾನಂದದಂ ಶೈಲ
ಕನ್ಯಾವರಂ ಪರಮರಮ್ಯಂ
ಕಾಮಮದ ಮೋಚನಂ ತಾಮರಸಲೋಚನಂ
ವಾಮದೇವಂ ಭಜೇ ಭಾವಗಮ್ಯಂ ॥

ನೌಮಿ:ನಾರಾಯಣಂ ನರಂಕರುಣಾಯನಂ
ಧ್ಯಾನ ಪಾರಾಯಣಂ ಜ್ಞಾನ ಮೂಲಂ
ಅಖಿಲ ಸಂಸಾರ ಉಪಕಾರಕಾರಣ ಸದಯ
ಹೃದಯ ತಪ ನಿರತ ಪ್ರಣತಾನುಕೂಲಂ ॥

ರಾಮಭಕ್ತಿಗೋಸ್ವಾಮಿ ತುಲಸೀದಾಸರ ಬಾಳಿನಲ್ಲಿ ಹಾಸುಹೊಕ್ಕಾಗಿದ್ದ ತತ್ತ್ವ. ಭವಬಂಧನವನ್ನು ಬಿಡಿಸಿಕೊಳ್ಳಲು ಎರಡು ಮಾರ್ಗಗಳಿವೆ. ಮೈಗೆ ಹಗ್ಗ ಬಿಗಿದಾಗ ಒಬ್ಬಾತ ದಪ್ಪಕ್ಕೆ ಬೆಳೆದು ತನ್ನ ಶಕ್ತಿಯಿಂದ ಹಗ್ಗವನ್ನು ಕಿತ್ತುಹಾಕಬಹುದು. ಇನ್ನೊಬ್ಬ ಸಣ್ಣಗಾಗುತ್ತ ಬಂದು ಕಟ್ಟು ಹಾಗೇ ಇದ್ದರೂ - ಕಳಚಿಕೊಳ್ಳಬಹುದು. ಬಂಧನವನ್ನು ಕಿತ್ತೊಗೆಯುವವನನ್ನು ಜ್ಞಾನಿ ಎನ್ನೋಣ. ತಾನು ಸಣ್ಣದಾಗಿ ಕಳಚಿಕೊಳ್ಳುವವನನ್ನು ಭಕ್ತನೆನ್ನೋಣ. ತುಳಸೀದಾಸರು ಈ ಎರಡನೆಯ ಗುಂಪಿಗೆ ಸೇರಿದ ಭಕ್ತಶ್ರೇಷ್ಠರು.



"ಅಕಾರನಕೋ ಹಿತು ಔರ್‌ಕೊಹ್ಯೆ"—ಇದು ವಿನಯಪತ್ರಿಕೆಯ ಒಂದು ಮುದ್ದಾದ ಕವಿತೆ. ಲೋಕದಲ್ಲಿ ಸಾಮಾನ್ಯವಾಗಿ, ಗೌರವ, ಪ್ರೀತಿ-ವಿಶ್ವಾಸ-ಉಪಕಾರ– ಇವೆಲ್ಲಕ್ಕೂ ಮೂಲಕಾರಣವಾಗಿ ಯಾವುದೋ ಒಂದು ಸ್ವಾರ್ಥವಿದ್ದೇ ಇರುತ್ತದೆ. ಆದರೆ ನಿಷ್ಕಾರಣವಾಗಿ ಉಪಕಾರ ಮಾಡುವುದೆಂದರೆ ಭಗವಂತನೊಬ್ಬನೇ. ಆತ ಅವ್ಯಾಜ ಕರುಣಾಮೂರ್ತಿ. ಆತನ ಕೃಪೆಗೆ ವಸ್ತುತಃ ಅನೇಕರು ಅರ್ಹರಲ್ಲ. ಆದರೂ ಆತ ಅವರನ್ನು ಕಾಪಾಡುತ್ತಿದ್ದಾನೆ. ಮೂರ್ಖನೂ

**ವಿದ್ವಾನ್ ಬ. ನ. ಗುಂಡೂರಾವ್**

ನೀಚನೂ ಆದ ನನ್ನನ್ನೂ ಶ್ರೀರಾಮಚಂದ ಕಾಪಾಡಿದನೆಂದರೆ, ಆತನ ನಿಷ್ಕಾರಣ ಪ್ರೇಮಕ್ಕೆ, ಅವ್ಯಾಜ ಕರುಣೆಗೆ ಬೇರೆ ನಿದರ್ಶನ ಬೇಕೇನು ? ಎನ್ನುತ್ತಾರೆ ತುಲಸೀದಾಸರು. ರಾಮನಾಮ ಆತನ ಬಾಳಿಗೆ ಆಧಾರವಾಗಿ ನಿಂತ ಕಲ್ಪವೃಕ್ಷ–ಕಾಮಧೇನು – ಚಿಂತಿತಾರ್ಥಪ್ರದಾಯಕವಾದ ಚಿನ್ತಾಮಣಿ.

ರಾಮನಾಮ ಪ್ರೇಮ ಪರಮಾರಥ ಕೊ
ಸಾರರೇ
ರಾಮನಾಮ ತುಲಸೀ ಕೊ ಜೀವನ
ಆಧಾರರೇ ॥

"ತೂ ದಯಾಳು ದೀನವ್ಹೈ ತೂ ದಾನಿ ಹೌಂ ಭಿಕಾರಿ (ನೀನು ದಯಾಮಯ, ನಾನು ದೀನ - ನೀನು ದಾತ - ನಾನು ಭಿಕಾರಿ)—ಎಂಬ ಕವನವನ್ನು ಹಾಡಿಕೊಳ್ಳುತ್ತ - ಕಂಬನಿ ಧಾರೆ ಧಾರೆಯಾಗಿ ಸುರಿಸುತ್ತ ಕುಳಿತಿರುತ್ತಿದ್ದ ತುಲಸೀದಾಸನನ್ನು ನಾನು ಅನೇಕ ಬಾರಿ ಕಂಡಿದ್ದೇನೆ – ಎನ್ನುತ್ತಾರೆ - ದಾಸರ ಆಪ್ತಮಿತ್ರನಾಗಿದ್ದ ಗಂಗಾರಾಮ ಜೋಷಿ.

ತಾಯಿ ಮಗುವನ್ನು ಹೊಡೆದು ಬಡಿದು ಗದರಿಸಿದರೂ ಅದು ಅವಳ ಮಡಿಲಲ್ಲೇ ಬಿದ್ದು ಗೋಳಾಡುತ್ತದೆ. ಆಕೆಯೇ ಅದನ್ನು ಸಮಾಧಾನ ಮಾಡಬೇಕು. ಗೋಳಾಡುವ ಕಂದನನ್ನು ಸಮಾಧಾನ ಮಾಡುವ ಶಕ್ತಿ ತಾಯಿಗಲ್ಲದೆ ಇನ್ನಾರಿಗೂ ಇಲ್ಲ. ತುಲಸೀದಾಸರು ಹೇಳುತ್ತಾರೆ - "ಜಾವು ಕಹಾಂ ತಜಿ ಚರನ ತುಮ್ಹಾರೆ" - ನಿನ್ನ ಪಾದಾರವಿಂದವನ್ನು ಬಿಟ್ಟು ನಾನೆಲ್ಲಿ ಹೋಗಲಿ ? ನಿರಾಕಾರನಾದ ಅವ್ಯಕ್ತ ಚಿತ್ರಕಾರನೊಬ್ಬ ಶೂನ್ಯ ಭಿತ್ತಿಯ ಮೇಲೆ ಯಾವ ಬಣ್ಣವೂ ಇಲ್ಲದೆ ಸಂಚರಿಸುವ ಇದೆಂತಹ ಕೋಟಿ ಕೋಟಿ ರಮ್ಯ ಚಿತ್ರಗಳನ್ನು ತಯಾರಿಸಿದ್ದಾನೆ. ಈ ಚಿತ್ರವನ್ನಳಿಸಲು ಯಾರಿಗೂ ಸಾಧ್ಯವಿಲ್ಲ. ಆದರೂ ಈ ಚಿತ್ರಕ್ಕೆ ಮರಣ ಭೀತಿ ತಪ್ಪಿಲ್ಲ.

"ಶೂನ್ಯ ಭಿತ್ತಿ ಪರ್ ಚಿತ್ರರಂಗ್ ನಹಿ ತನುಬಿನ ಲಿಖಾ ಚಿತೇರೇ" ಇದೆಲ್ಲ ಮೃಗಜಲ. ಈ ಮೃಗ ಜಲದಲ್ಲೊಂದು ಮೊಸಳೆ ಇದೆ. ಅದು

ಎಲ್ಲರನ್ನೂ ಹಿಡಿದು ಬಿಡುತ್ತದೆ—ಎಚ್ಚರಿಕೆ ಇರಲಿ— ಈ ಚಿತ್ರವನ್ನು ಕೆಲವರು ಸತ್ಯವೆಂದರು—ಕೆಲವರು ಮಿಥ್ಯೆಯೆಂದರು-ಕೆಲವರು ಸತ್ಯ ಮಿಥ್ಯಾತ್ಮಕವೆಂದರು. ಈ ಭಿನ್ನಾಭಿಪ್ರಾಯವನ್ನು ಬಗೆಹರಿಸುವುದು ಹೇಗೆ ? ಸಂತಕವಿ ತುಲಸೀದಾಸರ ದೃಷ್ಟಿಯಲ್ಲಿ ಈ ಜಗಳವೆಲ್ಲ ವೃಥಾ ಭ್ರಮೆ. ಈ ಭ್ರಮೆ ರಾಮನ ಕೃಪೆಯಿಂದ ಯಾರಿಗೆ ನಿವಾರಣೆಯಾಗಿದೆಯೋ ಅವನೇ ಸತ್ಯವನ್ನು ಕಂಡವನು ಎನ್ನುತ್ತಾರೆ ಈ ಸಂತರು.

ತುಲಸೀದಾಸರ ರಾಮ - ಸಕಲ ಕಲ್ಯಾಣ ಗುಣಧಾಮ ; ರಾಜರಾಜೇಂದ್ರ, ರಾಜೀವ ಲೋಚನ, ದೇವಮುನಿವಂದ್ಯ – ತಾಮರಸ ದಾಮದ್ಯುತಿದೇಹ - ಗುಣಗೇಹ - ವಿಶ್ವೋಪಕಾರಿ ಸಕಲ ಸೌಭಾಗ್ಯ ಸೌಂದರ್ಯ ಸುಷುಮಾರೂಪ— ಕಲಧೌತಮಣಿಮುಕುಟ— ನವನೀಲಕಂಜಾಭತನು —ಪರಮ ಕಾರಣಿಕ—ಭುವನೈಕ ಪ್ರಭು—ಅರುಣ ಕರ ಚರಣ ಮುಖನಯನ ರಾಜೀವ—ಸರ್ವದಾನಂದ ಸಂದೋಹ—ಘೋರಸಂಸಾರ ಪಾಥೋಧಿ ಪೋತ – ಧರ್ಮಕಲ್ಪದ್ರುಮಾರಾಮ – ಭಾನುಕುಲ ಕಮಲರವಿ—ಕೋಟಿಕಂದರ್ಪಛವಿ- ಅಖಿಲಲಾವಣ್ಯ ಗೃಹ—ವಿಶ್ವವಿಗ್ರಹ—ರತ್ನಹಾಟಕ ಜಟಿತ ಮುಕುಟ ಮಂಡಿತಮೌಳಿ—ಮಾರರಿಪು ಹೃದಯ ಮಾನಸ ಮರಾಳ—ಸುಲಭ ಮೃದು ಭಾವಗಮ್ಯ—ಪ್ರೇರಕಾನಂತ ತುರೀಯ—ವೇದಗರ್ಭಾರ್ಭಕ ಚಂಡಕೋದಂಡಧರ—ಕೋಸಲಾಧೀಶ – ಸಿದ್ಧ ಕವಿಕೋವಿದಾನಂದಪ್ರದ ವ್ಯಕ್ತಾವ್ಯಕ್ತ—ಕಲ್ಪನಾತೀತ—ಭಾವನಾತೀತ!!

ಋಷಿಕವಿ ತುಲಸೀದಾಸರ ಕಾವ್ಯವೀಣೆಯಿಂದ ಮೂಡಿಬಂದ ಈ ದಿವ್ಯಪದ ಸಂದೋಹವನ್ನು ಮಾತೆನ್ನಬೇಕೇ? ಮಂತ್ರವೆನ್ನಬೇಕೆ?

"ನೀನು ಅಭಯಪ್ರದಾನ ಮಾಡಲೇಬೇಕು. ಆದಾಗುವ ತನಕ ನಿನ್ನ ಮನೆಯ ಬಾಗಿಲು ಬಿಟ್ಟು ಕದಲುವುದಿಲ್ಲ. ಇದು ನಿನ್ನ ಪಾದಸಾಕ್ಷಿಯಾಗೂ ಸತ್ಯ—ನನಗೆ ಬೇಕಾದ್ದು ನಿನ್ನ ಕೃಪೆ. ಅದನ್ನು ನಾನು ಪಡೆದೇ ತೀರುತ್ತೇನೆ—ಏಕೆಂದರೆ ನೀನು ಕಠಿನ ಚಿತ್ತನಲ್ಲ. ಕೊಡಬೇಕಾದ್ದನ್ನು ಬೇಗ ಕೊಟ್ಟು ಬಿಡು. ನಾನು ಸಾಕಷ್ಟು ಬೇಸತ್ತು ಹೋಗಿದ್ದೇನೆ. ನೀನು ನನ್ನವನು – ಎಂದು ಒಂದೇ ಒಂದು ಮಾತಾಡು ರಾಮಚಂದ್ರ. ನಾನು ಮಹಾಪರಾಧಿ—ಬಹುಶಃ ಆ ಕಾರಣದಿಂದಲೇ ನೀನು ಮಾತಾಡದೇ ಇರಬಹುದು. ಸೀತೆ—ಲಕ್ಷ್ಮಣ—ಮಾರುತಿ—ಭರತ—ಶತ್ರುಘ್ನರ ಮುಂದೆ ಇವನು ನನ್ನವನು ಎಂದು ಹೇಳಲು ನೀನು ಹಿಂಜರಿಯುತ್ತಿರುವೆ. ಚಿಂತೆ ಇಲ್ಲ ಮನವೇ ಅಪನಾಯಿಯೋ—ಮೌನವಾಗಿ, ಮನಸ್ಸಿನಲ್ಲಾದರೂ ನನ್ನಮೇಲೆ ಕರುಣೆ ಇಟ್ಟು—ನಿನ್ನ ಬಾಗಿಲಬಳಿ ಬಿದ್ದಿರುವ ಈ ತುಲಸೀದಾಸನ ಕಡೆ ಒಂದೇ ಒಂದುಸಲ ಹಾಗೆ ನೋಡಬಾರದೇ ಪ್ರಭು!! ಇದು ಒಂದು ಕವಿತೆಯ ಸಾರಾಂಶ.

ರಾಜಾಸ್ಥಾನದ ನೀರಸ ಮರುಭೂಮಿಯಲ್ಲಿ ಕೃಷ್ಣಭಕ್ತಿಯ ಅಮೃತರಸಧಾರೆಯನ್ನು ಹರಿಸಿದ ಪರಮ ಭಕ್ತಳು ಮೀರಾಬಾಯಿ. ಆಕೆಯನ್ನು ಅತ್ತೆ—ಗಂಡ—ನಾದಿನಿ ಎಲ್ಲರೂ ಬಹುವಿಧವಾಗಿ ಚಿತ್ರಹಿಂಸೆಗೆ ಗುರಿಮಾಡಿದರು. ಏಕೆ ? ಆಕೆ ಮಾಡಿದ ಅಪರಾಧ—ಶ್ರೀಕೃಷ್ಣನನ್ನು ಕೊಂಡಾಡಿದ್ದು. ಆ ಮೋಹನ ಮುರಳೀವಾದನ ಪ್ರವೀಣನ ಸುಕುಮಾರ ಮುಗ್ಧ ಸೌಂದರ್ಯವನ್ನು ಹಾಡಿ ಹೊಗಳಿದ್ದು—ಆನಂದದಿಂದ ಹಾಡಿ ಕುಣಿದು ಧನ್ಯಳಾದದ್ದು. ಮನೆಯವರಿಟ್ಟ ಹಿಂಸೆಗಳನ್ನು ತಾಳಲಾರದೆ ಆಕೆ ಏನು ಮಾಡಬೇಕೆಂದು ತುಲಸೀದಾಸರನ್ನು ಕೇಳಿದಳಂತೆ. ಅವರು ಸನ್ನಿವೇಶಗಳನ್ನು ಗಮನಿಸಿ ಆಳವಾಗಿ ಯೋಚನೆಮಾಡಿ ಒಂದು ಸಲಹೆ ಕೊಟ್ಟರಂತೆ. ಆ ಸಲಹೆ ಒಂದು ಪುಟ್ಟಕವಿತೆಯ ರೂಪದಲ್ಲಿದೆ.

ಜಾಕೆ ಪ್ರಿಯ ನ ರಾಮುವೈದೇಹಿ
ತಜಿಯೆತಾಹಿ ಕೋಟಿವೈರೀಸಮ ಜದ್ಯಪಿ
ಪರಮ ಸನೇಹಿ

ಯಾರಿಗೆ ಸೀತಾರಾಮರು ಪ್ರಿಯರಲ್ಲವೋ—ಅಂತಹವರನ್ನು—ಅವರು ಎಷ್ಟೇ ಹತ್ತಿರದವರಾದರೂ ಚಿಂತೆಯಿಲ್ಲ—ಶತ್ರುಗಳಂತೆ ಭಾವಿಸಿ ತ್ಯಜಿಸಿ ಬಿಡು. ಇದು ಸರಿಯೆ? ಎಂದು ನೀನು ಕೇಳಬಹುದು, ಹಾಗೆ ಮಾಡಿದವರನೇಕರಿದ್ದಾರೆ. ಪ್ರಹ್ಲಾದ ತಂದೆಯನ್ನು ಬಿಟ್ಟ, ವಿಭೀಷಣ ಅಣ್ಣನನ್ನು ಬಿಟ್ಟ, ಬಲಿಚಕ್ರವರ್ತಿ ತನ್ನ ಗುರುವಾದ ಶುಕ್ರಾಚಾರ್ಯನನ್ನು ಬಿಟ್ಟ, ಗೋಕುಲದ ಗೋಪಿಯರು ತಮ್ಮ ಬಂಧು ಬಾಂಧವರನ್ನು ಬಿಟ್ಟರು. ಆದರೂ ಅವರನ್ನು ಯಾರೂ ಆಕ್ಷೇಪಣೆ ಮಾಡುವುದಿಲ್ಲ. ಕಣ್ಣಿಗೆ ಕಪ್ಪು ಹಚ್ಚಿಕೊಳ್ಳಬೇಕು ನಿಜ. ಆದರೆ ಅದು ಕಣ್ಣನ್ನು ಹಾಳುಮಾಡುವಂತಾದರೆ—ಅದನ್ನು ತೊಡೆದು ಹಾಕುವುದೇ ಕ್ಷೇಮಕರವಲ್ಲವೇ?—ನಿನ್ನ ವಿಷಯದಲ್ಲಿ ಇದು ನನ್ನ ಅಭಿಪ್ರಾಯ—ಎಂದು ದಾಸವರ್ಯರು ನಿರ್ಭಯವಾಗಿ ನಿರ್ಣಯಕೊಟ್ಟರು.

ಈ ದೀನಾತಿದೀನನಾದ ತುಲಸೀದಾಸನ ವಿಚಾರವನ್ನು ಸಮಯ ಸಂದರ್ಭ ನೋಡಿಕೊಂಡು—ಪ್ರಭು ರಾಮಚಂದ್ರನ ಗಮನಕ್ಕೆ ನೀವಾದರೂ ತರಬಾರದೇ— ಎಂದು ಸೀತೆ, ಮಾರುತಿ, ಲಕ್ಷ್ಮಣ ಇತ್ಯಾದಿ ರಾಮನ ಆಪ್ತ ವರ್ಗದವರನ್ನೆಲ್ಲ. ಅವರು ಬೇಡಿಕೊಂಡಿದ್ದಾರೆ— ಪ್ರಭು ಸನ್ನಿಧಿಯಲ್ಲಿ ಉತ್ತಮರಾದವರನ್ನು

(32 ನೇ ಪುಟ ನೋಡಿ)

ಶ್ರೀ ವೇಂಕಟನಾಥರ (ವೇದಾಂತದೇಶಿಕ)

# ಸ್ತೋತ್ರಗ್ರಂಥಗಳು

ಡಾ|| ಎನ್. ಅನಂತರಂಗಾಚಾರ್

ಕವಿತಾರ್ಕಿಕ ಸಿಂಹ ಎಂದು ಪ್ರಖ್ಯಾತರಾದ ಶ್ರೀ ವೆಂಕಟನಾಥರ ಕೃತಿಗಳಲ್ಲಿ ಸುಮಾರು ಕಾಲು ಭಾಗದಷ್ಟು ಸ್ತೋತ್ರಗಳು. ಆಚಾರ್ಯರು ಮೊತ್ತ ಮೊದಲು ಉಚ್ಚಮಟ್ಟದ ಭಗವದ್ಭಕ್ತರು. ಆಳ್ವಾರ್ರವರುಗಳಂತೆಯೇ ಅನುಭಾವಿಗಳು. ತಾವು ಉಪದೇಶಿದ ತತ್ತ್ವಗಳನ್ನು ಇಲ್ಲಿಯೇ ಸಾಕ್ಷಾತ್ಕರಿಸಿಕೊಂಡವರು. 'ಕಾಂಚೀಪುರೀ ಯಸ್ಸ ಹಿ ಜನ್ಮಭೂಮಿಃ ವಿಹಾರಭೂರ್ವೇಂಕಟ ಭೂಧರೇಂದ್ರಃ, ವಾಸಸ್ಥಲೀ ರಂಗಪುರೀ ತಮೀಡ್ಯಂ ತಂ ವೇಂಕಟೇಶಂ ಗುರುಮಾಶ್ರಯಾಮಃ' ಎಂಬ ನಯನಾಚಾರ್ಯರ ವಾಕ್ಯದಂತೆ ಅವರಿಗೆ ಕಾಂಚೀಪುರ, ತಿರುಪತಿ ಮತ್ತು ಶ್ರೀರಂಗಗಳು ಬಹು ಪವಿತ್ರವಾದ ಸ್ಥಳಗಳು. ಅಲ್ಲಿಯ ಒಂದೊಂದು ಅರ್ಚಾವಿಗ್ರಹವೂ ಅವರಿಂದ ಭಗವಂತನ ಸಾಕ್ಷಾತ್ ಪ್ರತೀಕವೆಂದೇ ಭಾವಿತವಾಗಿದ್ದವು. ಅವುಗಳೂ ತಾವು ಸಂಚಾರಮಾಡಿದ ಭಾರತದ ಎಲ್ಲ ಕ್ಷೇತ್ರಗಳ ಅಧಿದೇವತೆಗಳಾದ ಅರ್ಚಾಮೂರ್ತಿಗಳೂ ಅವರ ಹೃದಯವನ್ನು ಸೂರೆಗೊಂಡಿವೆ. ಈ ಮೂರ್ತಿಗಳನ್ನು ಸಂದರ್ಶನಮಾಡಿದಾಗ ಅವರ ಹೃದಯದಿಂದ ಹರಿದುಬಂದ ಭಕ್ತಿರಸ ಪ್ರವಾಹವೇ ಅವರ ಸ್ತೋತ್ರಗಳು. ಇಲ್ಲಿ ಕಂಡುಬರುವ ಪದಪ್ರಯೋಗದ ವೈಭವವೂ ನಾದಮಾಧುರ್ಯವೂ ಶಬ್ದಾರ್ಥಗಳ ಮೇಳನವೂ ರಹಸ್ಯಾರ್ಥಗಳ ಸಂಯೋಜನವೂ ಚಿತ್ತಾಕರ್ಷಕವಾಗಿವೆ. ಪ್ರಥಮ ವರ್ಗದ ದಾರ್ಶನಿಕರಾದ ಆಚಾರ್ಯರು ಇವುಗಳಲ್ಲಿ ಉಚ್ಚಮಟ್ಟದ ಉಪನಿಷದರ್ಥಗಳ ಸಂಪ್ರದಾಯದ ರಹಸ್ಯಾರ್ಥಗಳನ್ನು ತತ್ತದ್ದೇವತಾ ಸಂಬಂಧವಾದ ಬೀಜಾಕ್ಷರಗಳನ್ನು ಸಮೀಕರಣ ಮಾಡಿ ಸಾಮಾನ್ಯ ಗೀತೆಯಂತೆ ಕಾಣುವ ಅವನ್ನು ಶಾಸ್ತ್ರಮಟ್ಟಕ್ಕೂ ಏರಿಸಿದ್ದಾರೆ. ಅವುಗಳ ಪಠನದಿಂದ ಅನೇಕರು ತಮ್ಮ ವಾಂಛಿತಾರ್ಥಗಳ ಸಿದ್ಧಿಯನ್ನು ಪಡೆದಿರುವುದೂ ಉಂಟು. ಇವುಗಳ ಸಂಖ್ಯೆ ೩೨.

ಆಚಾರ್ಯರ ಸ್ತೋತ್ರಗಳಲ್ಲಿ 'ಹಯಗ್ರೀವ ಸ್ತೋತ್ರ'ವು ಬಹು ಪ್ರಸಿದ್ಧವಾದುದು. ಇದು ೩೨ ಉಪಜಾತಿ ವೃತ್ತಗಳಲ್ಲಿ ರಚಿತವಾಗಿದೆ. ಜ್ಞಾನಾನಂದಮಯನೂ ನಿರ್ಮಲ ಸ್ಫಟಿಕಾಕೃತಿಯುಳ್ಳವನೂ ವಿದ್ಯಾಧಿದೇವತೆಯೂ ಆದ ಹಯಗ್ರೀವನ ವಿಷಯಕವಾದುದು. ಇದು ಅವರ ಮೊದಲನೆಯ ಕೃತಿಯಿರಬಹುದು. ಅವರು ತಿರುವಹೀಂದ್ರಪುರದಲ್ಲಿದ್ದಾಗ ರಚಿತವಾಗಿದ್ದಿರಬೇಕು. ಇದನ್ನು ರಚಿಸಿದ ಸ್ಥಳವು ಈಗಲೂ ಅಲ್ಲಿ ನಿರ್ದೇಶಿಸಲ್ಪಡುವುದು. ಇದು ಹಯಗ್ರೀವಮಂತ್ರ ರಹಸ್ಯವನ್ನೊಳಗೊಂಡಿದೆಯೆಂದು ಅದಕ್ಕೆ ಗೌರವವಿದೆ. ಈ ಸ್ತೋತ್ರದ ವಿಷಯದಲ್ಲಿ ಆಚಾರ್ಯರಿಗೆ ಪರಮ ಪಕ್ಷಪಾತ. ಇದರ ಭಾಗವಾದ 'ಸಮಾಹಾರಸ್ಸಾಮ್ನಾಂ' 'ಸ್ವತಸ್ಸಿದ್ಧಂ' ಎಂಬ ಶ್ಲೋಕಗಳು ಅವರ ಇತರ ಗ್ರಂಥಗಳಲ್ಲಿ ಅನುವಾದಿತವಾಗಿವೆ. ಮಹಾಚಾರ್ಯರು ತಮ್ಮ 'ವೈಭವಪ್ರಕಾಶಿಕೆ' ಯಲ್ಲಿ ಈ ಸ್ತೋತ್ರವನ್ನು ವಿಶೇಷವಾಗಿ ಕೊಂಡಾಡಿದ್ದಾರೆ. ಇದಕ್ಕೆ ಭಾರದ್ವಾಜಂ ಶ್ರೀನಿವಾಸಾಚಾರ್ಯ, ಶ್ರೀಶೈಲ ತಿರುಮಲೈನಂಬಿ ರಾಘವಾಚಾರ್ಯ ಅವರುಗಳ ಸಂಸ್ಕೃತ ವ್ಯಾಖ್ಯಾನಗಳೂ ಗಾರ್ಗ್ಯಂ ವೆಂಕಟಾಚಾರ್ಯ, ಶಿನ್ನಾಮು ರಂಗನಾಥಾಚಾರ್ಯ, ಕುರುಚಿ ಗೋಪಾಲಾಚಾರ್ಯ





ಇವರುಗಳ ತಮಿಳು ವ್ಯಾಖ್ಯಾನಗಳೂ ವೆಂಕಟಾಚಾರ್ಯ ಮತ್ತು ಡಾ. ಎನ್. ಎಸ್. ಅನಂತ ರಂಗಾಚಾರ್ಯರ ಕನ್ನಡ ಅನುವಾದಗಳೂ ಇವೆ.

## ದಶಾವತಾರಸ್ತೋತ್ರಮ್

ಇದು ಶ್ರೀರಂಗನಾಥನ ವಿಷಯಕವಾದ ೧೩ ಶಾರ್ದೂಲ ವಿಕ್ರೀಡಿತ ವೃತ್ತಗಳನ್ನುಳ್ಳದ್ದು. ಶ್ರೀರಂಗದಲ್ಲಿ ರಚಿತವಾದುದು. ಇಲ್ಲಿಯವು ದಶಾವತಾರಮೂರ್ತಿಗಳ ಭಕ್ತಿಯುತವಾದ ವರ್ಣನೆಯಾಗಿದೆ. ಆಚಾರ್ಯರು ತಮ್ಮ 'ಸಂಕಲ್ಪ ಸೂರ್ಯೋದಯ'ದ ಏಳನೆಯ ಅಂಕದಲ್ಲಿ ಇದಕ್ಕೆ ಪ್ರಧಾನಸ್ಥಾನವನ್ನು ಕೊಟ್ಟಿದ್ದಾರೆ. ತಿರುವಹೀಂದ್ರಪುರದವರು ಅಲ್ಲಿಯ ದೇವನಾಯಕನ ವಿಷಯವಾದುದೆಂದು ಹೇಳುತ್ತಾರೆ. 'ವೈಭವಪ್ರಕಾಶಿಕೆ'ಯಲ್ಲಿ ಇದು ಭಗವಂತನ ಅದ್ಭುತಶಕ್ತಿಯನ್ನು ಪ್ರದರ್ಶಿಸುತ್ತದೆ ಎಂದು ಉಕ್ತವಾಗಿದೆ. ಇದಕ್ಕೆ ಶ್ರೀಶೈಲಂ ತಿರುಮಲೈನಂಬಿ ರಾಘವಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಕುರುಚಿ ಗೋಪಾಲಾಚಾರ್ಯ ಮತ್ತು ಗಾರ್ಗ್ಯಂ ವೆಂಕಟಾಚಾರ್ಯರ ದ್ರಾವಿಡ ವ್ಯಾಖ್ಯಾನಗಳೂ ಇವೆ.

## ಭಗವಧ್ಯಾನಸೋಪಾನಮ್

ರಂಗನಾಥನ ಆಪಾದಮಸ್ತಕ ವರ್ಣನೆಯಿಂದ ಕೂಡಿದ ೧೨ ಮಂದಾಕ್ರಾಂತ ವೃತ್ತಗಳನ್ನುಳ್ಳದು. ಪ್ರಪತ್ತಿ ಶಾಸ್ತ್ರದ ಪ್ರತೀಕದಂತಿದೆ. ಮುನಿವಾಹನ ಭೋಗರಾದ ತಿರುಪ್ಪಾಣಿ ಆಳ್ವಾರರವರ 'ಅಮಲನಾದಿಪ್ಪಿರಾನ್'ಮಾದರಿಯಲ್ಲಿದೆ. ಇದಕ್ಕೆ ಅನ್ನಿಲ್ ವೆಂಕಟಗೋಪಾಲದಾಸ, ರಾಘವಾಚಾರ್ಯ ಮತ್ತು ವೇದಾಂತರಾಮಾನುಜ ಸ್ವಾಮಿಗಳ ಸಂಸ್ಕೃತ ವ್ಯಾಖ್ಯಾನಗಳೂ ಶಿನ್ನಾಮು ರಂಗನಾಥಾಚಾರ್ಯ ಮತ್ತು ಗಾರ್ಗ್ಯಂ ವೆಂಕಟಾಚಾರ್ಯರ ತಮಿಳು ವ್ಯಾಖ್ಯಾನಗಳೂ ಇವೆ.

## ಗೋಪಾಲವಿಂಶತಿ

ಕೃಷ್ಣನ ವಿಷಯಕವಾದ ೨೧ ವಿವಿಧವೃತ್ತಗಳನ್ನುಳ್ಳದು. ಸರಳವಾದ ಶೈಲಿಯಲ್ಲಿದ್ದರೂ ಉದಾತ್ತವಾದ ಭಾವಗಳಿಂದ ಕೂಡಿದೆ. 'ವೈಭವ ಪ್ರಕಾಶಿಕೆ'ಯ ಪ್ರಕಾರ ಇದು ತಿರುವಹೀಂದ್ರಪುರದಲ್ಲಿ ರಚಿತವಾದುದು. ಇದರ ಅನೇಕ ಶ್ಲೋಕಗಳು ಆಚಾರ್ಯರ 'ಯಾದವಾಭ್ಯುದಯ'ದ ೧೫ನೆಯ ಸರ್ಗದಲ್ಲಿ ಅನುವದಿತವಾಗಿವೆ. ಮೊದಲನೆಯ ಶ್ಲೋಕವು ಅದರ ನಾಂದಿಪದ್ಯವಾಗಿದೆ. ಕೃಷ್ಣ ಭಕ್ತಿಯು ಇದರಲ್ಲಿ ಪರಮೋಚ್ಚಮಟ್ಟಕ್ಕೇರಿದೆಯೆಂದು ಅಪ್ಪಯ್ಯ ದೀಕ್ಷಿತರು ತಮ್ಮ ವ್ಯಾಖ್ಯಾನದಲ್ಲಿ ಶ್ರುತಪಡಿಸಿದ್ದಾರೆ. ದಿವಂಗತ ಮ। ಮ। ಶೇಟ್ಲೂರು ನರಸಿಂಹಾಚಾರ್ಯರು ಇದನ್ನು ಗೋಪಾಲಚಕ್ರದ ವಿವರಣೆಯೆಂದು ಭಾವಿಸಿದ್ದರು. ಇದಕ್ಕೆ ರಾಘವಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಶಿನ್ನಾಮು ರಂಗನಾಥಾಚಾರ್ಯ ಕುರುಚ್ಚಿ ಗೋಪಾಲಾಚಾರ್ಯರ ತಮಿಳು ವ್ಯಾಖ್ಯಾನಗಳೂ ಕೃಷ್ಣತಾತಾಚಾರ್ಯರ ಕನ್ನಡ ಭಾವಾನುವಾದವೂ ಎನ್. ಎಸ್. ಅನಂತರಂಗಾಚಾರ್ಯರ ಕನ್ನಡ ಪ್ರತಿಪದಾರ್ಥವೂ ಇದೆ.

## ಶ್ರೀಸ್ತುತಿ

ಇದರಲ್ಲಿ ೨೫ ಮಂದಾಕ್ರಾಂತ ವೃತ್ತಗಳಿವೆ. ದೇಶಿಕರ ಪೂರ್ವಾಚಾರ್ಯರನೇಕರು ಶ್ರೀಸ್ತುತಿಗಳನ್ನೂ ರಚಿಸಿದ್ದಾರೆ. ಅವುಗಳಲ್ಲಿ ಶ್ರೀ ಯಾಮುನರ ಶ್ರೀಸ್ತುತಿಯೇ ಇದಕ್ಕೆ ಪ್ರೇರಕ. ಸಾಂಪ್ರದಾಯಿಕ ಅಭಿಪ್ರಾಯದಂತೆ ಇದು ಶ್ರೀರಂಗದಲ್ಲಿ ರಚಿತವಾದುದು. ಕಾಂಚೀಪುರದವರು ಇದು ತಮ್ಮೂರಿನಲ್ಲಿ ರಚಿತವಾದುದೆಂದು ಹೇಳುತ್ತಾರೆ. ಗ್ರಂಥದಿಂದ ಈ ವಿಷಯವಾಗಿ ಏನೂ ತಿಳಿಯುವುದಿಲ್ಲ. ಸಂಸ್ಕೃತದಲ್ಲಿ ಆತ್ರೇಯ ವರದಾಚಾರ್ಯರಿಂದಲೂ ತಮಿಳಿನಲ್ಲಿ ಕುರುಚಿ ಗೋಪಾಲಾಚಾರ್ಯರಿಂದಲೂ ಕನ್ನಡದಲ್ಲಿ ಎನ್.ಎಸ್. ಅನಂತ ರಂಗಾಚಾರ್ಯರಿಂದಲೂ ವ್ಯಾಖ್ಯಾನಗಳಿವೆ.

## ಅಭೀತಿಸ್ತವಂ

ಶ್ರೀರಂಗನಾಥನ ವಿಷಯಕವಾದ ಸ್ತೋತ್ರ. ಸತ್ಯಮಂಗಲ (ಸತ್ಯಾಗಾಲ) ದಲ್ಲಿದ್ದಾಗ ರಚಿತವಾದುದು. ೨೯ ಶ್ಲೋಕಗಳಿಂದ ಕೂಡಿದೆ. ಆಚಾರ್ಯರ ಇಳಿವಯಸ್ಸಿನ ಪರಿಪಕ್ವ ಕವಿತೆಯಿದು. ಆತ್ಮೀಯವಾದ ಕೆಲವು ವಿಷಯಗಳೂ ಸಮಸಾಮಯಿಕ ಸಮಾಜಸ್ಥಿತಿಯೂ ಅಲ್ಲಲ್ಲಿ ಉಕ್ತವಾಗಿದೆ. ಇದರಲ್ಲಿ ಉಕ್ತವಾಗಿರುವ 'ಪರಸ್ಪರ ಹಿತೈಷಿಣಾಂ ಪರಿಸರೇಷು ಮಾಂ ವರ್ತಯ' ಎಂಬ ಪ್ರಾರ್ಥನೆಯು ಬಹು ಅರ್ಥಪೂರ್ಣವಾಗಿದೆ. ಗಾರ್ಗ್ಯ ವೆಂಕಟಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಶಿನ್ನಾಮು ರಂಗನಾಥಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇವೆ.

## ವರದರಾಜಪಂಚಾಶತ್

ಕಾಂಚೀಪುರದ ವರದರಾಜರ ಪ್ರಾರ್ಥನಾ ರೂಪವಾದುದು. ೫೧ ಶ್ಲೋಕಗಳನ್ನುಳ್ಳದು. ಆಚಾರ್ಯರ ಯವ್ವನದ ಉತ್ಸಾಹ ಇದರಲ್ಲಿ ಬಹುಮಟ್ಟಿಗೆ ಪ್ರದರ್ಶಿತವಾಗಿದೆ. ಇದಕ್ಕೆ 'ದೇವರಾಜ ಪಂಚಾಶತ್' ಎಂಬ ಪರ್ಯಾಯ ನಾಮಧೇಯವೂ ಉಂಟು. ವರದರಾಜರ ಸಂಪೂರ್ಣ ಸೌಂದರ್ಯವು ಇದರಲ್ಲಿ ಕೇಂದ್ರೀಕೃತವಾಗಿದೆ. ಅವರ ಬ್ರಹ್ಮೋತ್ಸವದ ಚಿತ್ರವು ಆಕರ್ಷಕವಾಗಿದೆ. ಇದನ್ನು ಶಾಸ್ತ್ರಕವಿತೆಯೆಂದರೂ ತಪ್ಪಾಗುವುದಿಲ್ಲ. ಕರೂರು ಶ್ರೀನಿವಾಸಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಶಿನ್ನಾಮು ರಂಗನಾಥಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇವೆ.

## ವೇಗಾಸೇತು ಸ್ತೋತ್ರಂ

ಕಾಂಚೀಪುರದಲ್ಲಿರುವ ಯಥೋಕ್ತಕಾರಿ ಪೆರುಮಾಳ್ ಸ್ತೋತ್ರವಿದು. ೧೦ ಶ್ಲೋಕಗಳನ್ನು

(29ನೇ ಪುಟ ನೋಡಿ)

ಶ್ರೀಮತಿ ವತ್ಸಲಾ ಲಕ್ಷ್ಮೇಶ್ವರ

# ಶ್ರೀ ವಿಜಯ ದಾಸರು

ಕರ್ನಾಟಕದಲ್ಲಿ ಹರಿದಾಸಚತುಷ್ಟಯ ಅತ್ಯಂತ ಪ್ರಸಿದ್ಧರೆನಿಸಿದವರು. ಈ ನಾಲ್ಕು ಮಂದಿ ದಾಸರೆಂದರೆ ಶ್ರೀ ಪುರಂದರದಾಸರು, ಶ್ರೀ ವಿಜಯ ದಾಸರು. ಶ್ರೀ ಗೋಪಾಲದಾಸರು ಮತ್ತು ಶ್ರೀ ಜಗನ್ನಾಥದಾಸರು. ಕರ್ನಾಟಕದಲ್ಲಿ ಶ್ರೀ ವಿಜಯ ದಾರಸ ಹೆಸರು ಕೇಳದವರೇ ಇಲ್ಲ. ತುಂಗಭದ್ರಾ ತೀರದಲ್ಲಿ ಚೀಕಲಪರಿಯೆಂಬ ಗ್ರಾಮವು ಮಾನ್ವಿಗೆ ಎಂಟು ಮೈಲು ದೂರವಿದೆ. ಇದೇ ಶ್ರೀ ವಿಜಯ ದಾಸರ ಜನ್ಮಸ್ಥಳ. ಹದಿನೆಂಟನೆಯ ಶತಮಾನದ ಆದಿಭಾಗದಲ್ಲಿ ಶ್ರೀನಿವಾಸನೆಂಬ ಬ್ರಾಹ್ಮಣನು ಈ ಚೀಕಲಪರಿಯಲ್ಲಿ ವಾಸವಾಗಿದ್ದನು. ಈತನ ಹೆಂಡತಿ ಕೂಸಮ್ಮ. ಈ ದಂಪತಿಗಳು ಶ್ರೀ ಅಶ್ವತ್ಥ ನರಸಿಂಹ ದೇವರ ಅನುಗ್ರಹದಿಂದ ಮೂರು ಮಕ್ಕಳನ್ನು ಪಡೆದರು. ಇವರಲ್ಲಿ ಹಿರಿಯರಾದವರು ದಾಸಪ್ಪ. ಇವರೇ ಮುಂದೆ ಪ್ರಖ್ಯಾತ ಶ್ರೀ ವಿಜಯದಾಸರೆನಿಸಿಕೊಂಡರು. ಹಳ್ಳಿಯ ವಾಸದಿಂದಲೂ ಮತ್ತು ಬಡತನದ ಕಾರಣದಿಂದಲೂ ದಾಸಪ್ಪನಿಗೆ ವಿದ್ಯಾಭ್ಯಾಸವಾಗಲಿಲ್ಲ. ಅದೇ ಸಮಯಕ್ಕೆ ಆದವಾನಿಯಲ್ಲಿ ರಾಘವೇಂದ್ರ ರಾಯನೆಂಬವನು ನವಾಬು ಬಸಾಲತೆಜಂಗನ ರಾಜಧಾನಿಯಲ್ಲಿ ತಹಶೀಲದಾರನಾಗಿದ್ದನು. ರಾಘವೇಂದ್ರರಾಯನ ಮಗನ ವಿವಾಹ ಸಮಾರಂಭವು ಆದವಾನಿಯಲ್ಲಿ ಬಹು ವಿಜೃಂಭಣೆಯಿಂದ ಜರುಗವುದೆಂಬುದು ಎಲ್ಲರಿಗೂ ತಿಳಿದು ಬಂದಿತ್ತು. ದಾಸಪ್ಪನಿಗೂ ತಿಳಿಯಿತು. ಎಂಟು ದಿನಗಳವರೆಗೆ ಮೃಷ್ಟಾನ್ನ ಭೋಜನ, ಕೈತುಂಬ ದಕ್ಷಿಣೆ, ಯಾರಿಗೆ ಬೇಡ? ದಾಸಪ್ಪನು ಆದವಾನಿಗೆ ಬಂದನು. ದಾಸಪ್ಪ ಬಡವನಾಗಿದ್ದರೂ ದೃಢಕಾಯದವನಾಗಿದ್ದನು. ದಾಸಪ್ಪನ ಬಡತನದ ಮತ್ತು. ದಡ್ಡತನದ ಲಾಭ ತೆಗೆದುಕೊಂಡು ಜನರು ಅವನನ್ನು "ಕೂಸಿಮಗದಾಸ" ನೆಂದು ಹೀಯಾಳಿಸುತ್ತಿದ್ದರು. ಮದುವೆಯ ಸಮಾರಂಭದಲ್ಲಿ ಭೋಜನಕ್ಕೆ ಕೂಡುವ ಸಮಯ. ಅಷ್ಟರಲ್ಲಿ ರಾಘವೇಂದ್ರ ರಾಯನು ಪಂಕ್ತಿಯಲ್ಲಿ ಬಂದನು. ಅವನು ಉಟ್ಟ ಪೀತಾಂಬರ ಕೈಯೊಳಗಿನ ಭಂಗಾರದ ಥಾಲಿ ಬೆರಳುಗಳಲ್ಲಿಯ ಉಂಗುರುಗಳನ್ನು ನೋಡಿ ಜನ ಬೆರಗಾಯಿತು. ರಾಯರು ಪಂಕ್ತಿಯಲ್ಲಿ ಬಂದ ಕಾರಣ ಬೇರೆಯಾಗಿತ್ತು. ಸಾವಿರಾರು ಜನರಿಗೆ ಗಂಧವನ್ನು ತೇಯ್ದು ಒದಗಿಸುವ ಒಬ್ಬ ಬಿಟ್ಟ ಮನುಷ್ಯನನ್ನು ಕಂಡುಹಿಡಿಯುವದಾಗಿತ್ತು. ದುರ್ದೈವಕ್ಕೆ ತಕ್ಕಂತೆ ದಾಸಪ್ಪನ ಮೇಲೆ ರಾಯರ ಕಟಾಕ್ಷ ಬಿದ್ದಿತು. 'ಏಳು' ತಿನ್ನುವುದಕ್ಕೆ ಕುಳಿತೆಯೋ ನಿನಗೇನು ಧಾಡಿ, ಈ ಕೊರಡು ಮುಗಿಯುವ ತನಕ ಗಂಧವನ್ನು ತೇಯಿ ನಡೆ, ನಿನ್ನ ಹೆಸರೇನು" ಎಂದು ಜಬರಿಸಿದರು. "ಚೀಕಲಪರಿಯ ದಾಸಪ್ಪನಾನು'ಎಂದನುದಾಸಪ್ಪರಾಯರು "ಒಹೋ ನೀನೇ ಏನು ಕೂಸಿಮಗ ದಾಸ ನಡೆ" ಎಂದರು. ಮತ್ತೆ ಜಬರಿಸಿದರು ರಾಯರ ನಡತೆಯಿಂದ ಚುಚ್ಚುಮಾತುಗಳಿಂದದಾಸಪ್ಪನಿಗೆ ತೀವ್ರವಾದ ಮನೋವ್ಯಥೆಯುಂಟಾಯಿತು. ಉಪಾಯವಿಲ್ಲದೇ ತುಳಸೀಕಟ್ಟೆಯಮೇಲೆ ಗಂಧವನ್ನು ತೇಯುತ್ತಾ ಕುಳಿತನು. ಎಷ್ಟೋ ಪಂಕ್ತಿಗಳಾದರೂ ದಾಸಪ್ಪನಿಗೆ ಭೋಜನಕ್ಕೆ ಯಾರೂ ಕರೆಯಲಿಲ್ಲ ರಾತ್ರಿ ಊಟ ಕೂಡಾ ಮುಗಿದು ಹೋಯಿತು. ದಾಸಪ್ಪನು ಅಷ್ಟಗೆ ಹಾಕಿಕೊಂಡು ವೃಂದಾವನದ ಸಮೀಪ ಉಪವಾಸ ಕುಳಿತನು. ತಹಶೀಲದಾರನ ಕಟಾಕ್ಷ ಇಲ್ಲಿ ಕೂಡಾ ದಾಸಪ್ಪನ ಮೇಲೆ ಬಿದ್ದಿತು. ಅವನನ್ನು ಗದರಿಸಿಆಚೆಗೆ ತಳ್ಳಿದನು ಅಪಮಾನಿತನಾದ ದಾಸಪ್ಪನು ಕಾಲುನಡೆದ ದಾರಿಯಲ್ಲಿನಡೆದು ಬೆಳಗಿನ ಸಮಯದಲ್ಲಿ ಘಾಗಿಗೆ ಬಂದನು-ಅಲ್ಲಿ ಕೇಶವರಾಯನ ಮನೆಯಲ್ಲಿದಾಸಪ್ಪನಿಗೆ ಆದರದಿಂದ ಭೋಜನವಾಯಿತು. ತಹಶೀಲದಾರನ ಮನೆಯಲ್ಲಿ ಆದ ಅಪಮಾನವನ್ನು ನೆನೆಯುತ್ತ ಊರಿಗೆ ಹೋಗದೇ ತಂದೆತಾಯಿಗಳಿಗೆ ವರ್ತಮಾನ ತಿಳಿಸದೇ ಉತ್ತರ ದೇಶದ ಯಾತ್ರೆಗೆ ಹೋದನು. ನಾಲ್ಕು ವರುಷಕಾಲ ಉತ್ತರದೇಶದಲ್ಲಿ ಸಂಚರಿಸಿ ತಿರುಗಿ ಚೀಕಲಪರಿಗೆ ಬಂದನು. ಮಗನನ್ನು ನೋಡಿ ತಂದೆ ತಾಯಿಗಳಿಗೆ ಬಹು ಸಂತೋಷವಾಯಿತು. ಮತ್ತೆಲ್ಲಾದರೂ ಬಿಟ್ಟು ಹೋಗುವನೆಂಬ ಭಯದಿಂದ ಅರಳಮ್ಮನ ಜೊತೆಗೆ ಅವನ ವಿವಾಹವನ್ನು ಮಾಡಿದರು. ತಂದೆತಾಯಿಯರು ಮೃತರಾದ ನಂತರ ಮತ್ತೆ ಕಾಶೀ ಯಾತ್ರೆಗೆ ಪ್ರಯಾಣಮಾಡಿದನು. ಕಾಶಿಗೆ ಬಂದು ಸಾಧುಗಳ ಗುಂಪಿನಲ್ಲಿ ಸೇರಿ ಯಾವದಾದರೊಂದು ರೂಪದಲ್ಲಿ ಊಟಮಾಡಿ ಶುದ್ಧ ಮನಸ್ಸಿನಿಂದ ಶ್ರೀ ಹರಿಯನ್ನು ಧ್ಯಾನಿಸುತ್ತಾ ಕಾಲಯಾಪನೆ ಯನ್ನು ಮಾಡಿದನು.

ಒಂದು ರಾತ್ರಿ ಸ್ವಪ್ನದಲ್ಲಿ ಶ್ರೀಹರಿಯು ಪುರಂದರದಾಸರ ರೂಪದಲ್ಲಿ ಬಂದು ವ್ಯಾಸಕಾಶಿಗೆ ಕರೆದೊಯ್ದು ಅಲ್ಲಿ ವೇದವ್ಯಾಸರ ದರ್ಶನವನ್ನು ದಾಸಪ್ಪನಿಗೆ ಮಾಡಿಸಿ "ಇಂದಿನಿಂದ ನೀನು ಹರಿದಾಸನಾದೆ" ಎಂದು ದಾಸಪ್ಪನ ನಾಲಿಗೆಯ ಮೇಲೆ 'ವಿಜಯ' ಎಂಬ ಅಕ್ಷರಗಳನ್ನು ಬರೆದನು. ಆ ನಿಮಿಷದಿಂದ ದಾನಪ್ಪನ ದೃಷ್ಟಿಯೇ ಬದಲಾಯಿತು. 'ಕೂಸಿ ಮಗ ದಾಸನು' 'ವಿಜಯದಾಸರು' ಎಂಬ ಪಾವನನಾಮದಿಂದ ಕರೆಸಿಕೊಂಡನು. ಭಗವದನುಗ್ರಹವಾದರೆ ಎಲ್ಲ ಭಾಗ್ಯವು ತಾನೇ ಬರುವದು. ಅದರಂತೆ ಶ್ರೀ ವಿಜಯದಾಸರು ಕಾಶಿಯಿಂದ ಪ್ರಯಾಣ ಹೊರಟರೆ ಅವರ ಜೊತೆಯಲ್ಲಿ ಮೇನೆ ಪಲ್ಲಕ್ಕಿಗಳು ಹೊರಟವು. ನೂರಾರು ಜನರು ಶಿಷ್ಯರಾದರು. ರಾಜಧಾನಿ, ನಗರಗಳಲ್ಲಿ ಅವರಿಗೆ ರಾಜಾಧಿರಾಜರಿಂದ ಸನ್ಮಾನವಾಯಿತು. ಹೋದ ಕಡೆಗೆಲ್ಲಾ ಮೃಷ್ಟಾನ್ನ ಭೋಜನ. ವಿಜಯನಗರದ ಜಮೀನುದಾರರು. ಶ್ರೀ ವಿಜಯದಾಸರ ಖ್ಯಾತಿಯನ್ನು ಕೇಳಿ ಅವರ ಕಥಾ ಶ್ರವಣಮಾಡಿ ಧನ್ಯರಾದರು. ಈ ಎಲ್ಲವನ್ನೂ ಒಂದೊಂದಾಗಿ ಧ್ಯಾನಿಸಿಕೊಂಡು ತಮ್ಮಲ್ಲಿ ತಾನೆ ನಗುತ್ತಾ ಆಶ್ಚರ್ಯಪಡುತ್ತಾ ಪರಮಾತ್ಮನನ್ನು ವಂದಿಸುತ್ತಾ ತಹಶೀಲದಾರ ರಾಘವೇಂದ್ರರಾಯನ ಕ್ರೂರ ವರ್ತನೆಯನ್ನು ಜ್ಞಾಪಿಸಿಕೊಂಡು ಘಾಗಿಯ ಕೇಶವರಾಯನ ಮನೆಯ ಹುಗ್ಗಿಯನ್ನು ಆತನ ಉಪಕಾರವನ್ನು ಸ್ಮರಿಸಿಕೊಂಡು ಪರಿವಾರ ಸಹಿತ ಚೀಕಲಪರಿಗೆ ಬಂದರು.

ಆ ಕಾಲದಲ್ಲಿ ಕಲ್ಲೂರ ಸುಬ್ಬಣ್ಣಾಚಾರ್ಯರೆಂಬ 'ಸುಧಾ' ಪಾಠಕರೊಬ್ಬರಿದ್ದರು. ಒಂದು ದಿನ ಆಚಾರ್ಯರ 'ಸುಧಾ' ಮಂಗಳಕ್ಕೆ ಸಾವಿರಾರು ಜನರು ಸೇರಿದ್ದರು. ಆಚಾರ್ಯರಿಗೆ ವಿಜಯದಾಸರೆಂದರೆ ಅನಾದರ.ಅವರ ಪ್ರಾಬಲ್ಯ ಅವರಿಗೆ ಸಹನವಾಗಲಿಲ್ಲ. ಆ ದಿನ ಅಡಿಗೆಮಾಡಲು ಪಾಚಕನು ಬರಲಿಲ್ಲ. ಆಗ ಉತ್ಸವ ಭಂಗ ಮಾಡಬಾರದೆಂದು ಪಾಚಕ ವೇಷದಿಂದ ದಾಸರು ಅಲ್ಲಿಗೆ ಬಂದು ಸ್ವಲ್ಪ ಹೊತ್ತಿನಲ್ಲಿ ಮಂಡಿಗೆ ಸಹಿತ ಎಲ್ಲಾ ಅಡಿಗೆಯನ್ನು ಮಾಡಿಟ್ಟು 'ಸುಧಾ' ಅನುವಾದ ನಡೆಯುತ್ತಿರುವ ಸಭೆಯಲ್ಲಿ ಬಂದು ಕುಳಿತರು. ಅಲ್ಲಿ ಕುಳಿತ ಜನರಿಗೆ ಇವರು ವಿಜಯದಾಸರೆಂದು ಗೊತ್ತಾಯಿತು. ಅಷ್ಟರಲ್ಲಿ ಸುಬ್ಬಣ್ಣಾಚಾರ್ಯರಿಗೂ ಈ ಸುದ್ದಿ ತಿಳಿಯಿತು. ಆಗ ದಾಸರು ಆಚಾರ್ಯರಿಗೆ ನಮಸ್ಕರಿಸಿ ತಮಗೆ ನ್ಯಾಯಸುಧೆಯ ಒಂದು ವಾಕ್ಯವನ್ನಾದರೂ ಉಪದೇಶ

(27ನೇ ಪುಟ ನೋಡಿ)

ನಮ್ಮ ಸಂಸ್ಥೆ

# ಶ್ರೀವೆಂಕಟೇಶ್ವರ ಶಿಲ್ಪಕಲಾಶಾಲೆ



ರೇಖಾಚಿತ್ರ–ಕೆ.ಕೆ. ಹರಿನಾಥರೆಡ್ಡಿ 2ನೇ ವರ್ಷದ ವಿದ್ಯಾರ್ಥಿ

ಶಿಲ್ಪ ಕಲೆ ಭಾರತದ ಹೆಮ್ಮೆಯ ಕಲೆಯಾಗಿದ್ದು ಇದರ ಪ್ರತಿಕೃತಿಗಳನ್ನು ವಿದೇಶೀಯರು ತಮ್ಮಲ್ಲಿ ರೂಢಿಸಿಕೊಳ್ಳುತ್ತಿರುವುದು ಇದೀಗ ಮಾತ್ರ. ತಿರುಮಲೆ ತಿರುಪತಿ ದೇವಸ್ಥಾನದವರು ಧರ್ಮ, ಸಂಸ್ಕೃತಿ, ಕಲೆ, ವಿದ್ಯೆ, ವೈದ್ಯ ಮೊದಲಾದ ಕ್ಷೇತ್ರಗಳಲ್ಲಿ ಸಾಧಿಸಿರುವ ಅದ್ವಿತೀಯ ಸಾಧನೆ ಎಂಥವರನ್ನೂ ಆಶ್ಚರ್ಯಪಡಿಸುವಂಥದ್ದೇ ಸರಿ.

ತಿರುಪತಿಯ ದೇವಸ್ಥಾನದವರ 3ನೇ ಸತ್ರದ ಹಿಂಬದಿಯಲ್ಲಿರುವ ವಿಶಾಲವಾದ ಶಿಲ್ಪಕಾರ್ಯಾಗಾರದಲ್ಲಿ ಬೆಳಗ್ಗೆಯಿಂದ ಸಂಜೆಯವರೆಗೆ ಸುತ್ತಿಗೆ ಉಳಿಗಳ ಸಂಘರ್ಷದ ಹಿತವಾದ ಧ್ವನಿ ಕೇಳಿಬರುತ್ತಿದ್ದು ಅತ್ತ ಸುಳಿದವರ ಕಣ್ಮನಗಳನ್ನು ಆಕರ್ಷಿಸುತ್ತದೆ. ದೇವರು ಮಾನವರನ್ನು ಸೃಷ್ಟಿಸಿದನೆಂಬುದಂತೂ ಸತ್ಯ, ಆದರೆ ಮಾನವ ದೇವರ ಸೃಷ್ಟಿಮಾಡುತ್ತಿದ್ದಾನೆಂಬುದೂ ಅಷ್ಟೇ ಸತ್ಯವಿಲ್ಲಿ. ತಿರುಮಲೆಯ ತಿಮ್ಮಪ್ಪನಿಗೆ ಸಲ್ಲುವ ಪ್ರತಿ ದಮಡಿಯೂ ಒಂದಲ್ಲ ಒಂದು ಸತ್ಕಾರ್ಯದಲ್ಲಿ ಸದ್ವಿನಿಯೋಗ ವಾಗುತ್ತಿದೆ ಎಂಬುದರ ನೂರಾರು ನಿದರ್ಶನಗಳಲ್ಲಿ ಇದೊಂದು ಮಾತ್ರ ಈ ಶಿಲ್ಪಕಲಾ ಶಾಲೆ.

**ಸೀತಾಪ್ರಿಯ**

## ವಿದ್ಯಾರ್ಥಿಗಳು

ಇಲ್ಲಿ 15 ರಿಂದ 20 ವರ್ಷದೊಳಗಿನ ಪ್ರತಿಭಾವಂತ ವಿದ್ಯಾರ್ಥಿಗಳು ಉಳಿ ಸುತ್ತಿಗೆಗಳನ್ನು ಹಿಡಿದು, ಕೈಲಿ ಪೆನ್ಸಿಲ್ ಡ್ರಾಯಿಂಗ್ ಕಾಗದ ಬಿಡಿಸಿ ಕಲಾಭ್ಯಾಸದಲ್ಲಿ ತಲ್ಲೀನವಾಗಿದ್ದಾರೆ. ಈ ಈ ಲೇಖಕ ಆ ಕಲಾಶಾಲೆಯನ್ನು ಪ್ರವೇಶಿಸುತ್ತಿದಂತೆಯೇ ನಸುನಗುತ್ತ ಅತ್ಯಾದರದಿಂದ ಬರಮಾಡಿಕೂಂಡ ಸಿಬ್ಬಂದಿಯ ಸೌಜನ್ಯಪೂರ್ಣ ನಡವಳಿಕೆ ಅಲ್ಲಿಯ ಶಿಸ್ತುಬದ್ಧತೆಯನ್ನು ಒಮ್ಮೆಲೇ ಗಮನಕ್ಕೆ ತಂದಿತು. ತತ್ಕಾಲ ಒಟ್ಟು 45 ಮಂದಿ ವಿದ್ಯಾರ್ಥಿಗಳು ಶಿಲ್ಪಕಲಾ ಶಿಕ್ಷಣ ಪಡೆಯುತ್ತಿದ್ದಾರೆ. ಅವರಲ್ಲಿ ಎಲ್ಲ ಜನಾಂಗದವರೂ ಉಂಟು. ಇಲ್ಲಿಯ ವಿದ್ಯಾರ್ಥಿಗಳು ಅಧ್ಯಯನ ಶೀಲರಷ್ಟೇ ಅಲ್ಲದೆ ನಿಯಮಬದ್ಧರೂ ಆಗಿದ್ದಾರೆ.

## ಅವಧಿ

4 ವರ್ಷಗಳ ಅವಧಿಯ ಶಿಲ್ಪಕಲಾಶಿಕ್ಷಣ ಇಲ್ಲಿ 1960 ರಿಂದಲೇ ಕೊಡಲಾಗುತ್ತಿದೆ. ಇಲ್ಲಿ ಈ 20 ವರ್ಷಗಳಲ್ಲಿ ಶಿಕ್ಷಣ ಪಡೆದು ಪೂರೈಸಿ ನಡೆದವರೆಲ್ಲರೂ ಪ್ರಸಿದ್ಧ ಸ್ಥಪತಿ ಗಳಾಗಿದ್ದಾರೆ. ತಮಿಳುನಾಡಿನ ಮಹಾಬಲಿಪುರಂ ಮಾದರಿಯಲ್ಲಿಯೇ ಶಿಕ್ಷಣ ಅವಧಿ ಇಲ್ಲಿ ಕೂಡ ರೂಪಿತವಾಗಿದ್ದು ತತ್ಕಾಲ ಇಂದು ಮೊದಲ ವರ್ಷದಲ್ಲಿ 8 ಮಂದಿ, ಎರಡನೆಯ ವರ್ಷದಲ್ಲಿ 18 ಮಂದಿ, ಮೂರನೆಯ ವರ್ಷದಲ್ಲಿ 13 ಮಂದಿ ಮತ್ತು ನಾಲ್ಕನೆಯ ಅಂತಿಮ ವರ್ಷದಲ್ಲಿ 6 ಮಂದಿ ಶಿಕ್ಷಣ ಪಡೆಯುತ್ತಿದ್ದಾರೆ.

## ವಿವಿಧತೆಯಲ್ಲಿ ಏಕತೆ

ಇಲ್ಲಿ ಭಾರತದ ಎಲ್ಲ ಕಡೆಗಳಿಂದ ಬರುವ ವಿದ್ಯಾರ್ಥಿಗಳಿಗೂ ಅವಕಾಶವುಂಟು. ಈಗ ಸದ್ಯಕ್ಕೆ ದಕ್ಷಿಣ ಭಾರತದ ನಾಲ್ಕು ರಾಜ್ಯಗಳಿಂದ ಬಂದ ವಿದ್ಯಾರ್ಥಿಗಳಷ್ಟೇ ಇದ್ದಾರೆ. ಅವರೆಲ್ಲ ಒಂದೇ ಕುಟುಂಬದ ಮಕ್ಕಳಂತೆ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ನಡೆದುಕೊಂಡು ಉಚಿತವಾದ ಕೋಣೆಗಳಲ್ಲಿ ಬಿಡಾರ ಹೂಡಿದ್ದಾರೆ. 3 ನೆಯ ಸತ್ರದಲ್ಲಿಯೇ ಈ ವಿದ್ಯಾರ್ಥಿಗಳಿಗೆ ವಾಸಿಸಲು ಕೋಣೆಗಳನ್ನು ಕೊಡಲಾಗಿದ್ದು ಯಾವ ತೊಂದರೆಯೂ ಇಲ್ಲದೆಶಿಕ್ಷಣ ಪಡೆಯುತ್ತಿದ್ದಾರೆ.

## ವಿದ್ಯಾರ್ಥಿ ವೇತನ

ಪ್ರತಿಯೊಬ್ಬ ವಿದ್ಯಾರ್ಥಿಗೂ ಇಲ್ಲಿ ವಿದ್ಯಾರ್ಥಿ ವೇತನ ಕೊಡಲಾಗುತ್ತದೆ. ಈಗ ತಿಂಗಳಿಗೆ 75ರೂಗಳಂತೆ ವೇತನ ಕೊಡುತ್ತಿದ್ದು, ಶೀಘ್ರದಲ್ಲಿಯೆ ಈ ವೇತನವನ್ನು 200 ರೂಗಳಿಗೆ ಏರಿಸುವ ಸಾಧ್ಯತೆ ಕಂಡು ಬರುತ್ತಿದೆ. ದೇವಾಲಯದ ಆಡಳಿತವರ್ಗ ತನ್ನ ಹಲವಾರು ಕಾರ್ಯಕ್ರಮಗಳಲ್ಲಿ ಯಾವುದನ್ನೂ ನಿರ್ಲಕ್ಷಿಸದೆ ನಡೆಸಿಕೊಂಡು ಬರುತ್ತಿರುವುದು ಸಿಬ್ಬಂದಿಯ ಕಾರ್ಯದಕ್ಷತೆಗೆ ಸಾಕ್ಷಿಯಾಗಿದೆ ಎನ್ನ ಬಹುದು. ವಿದ್ಯಾರ್ಥಿಗಳಿಗೆ ರಿಯಾಯಿತಿ ದರದಲ್ಲಿ ದೇವಾಲಯದ ಭೋಜನಶಾಲೆಯಲ್ಲಿ ಊಟವನ್ನು ಒದಗಿಸಲಾಗುತ್ತಿದೆ.

## ನಿಷ್ಠೆ

ವಿದ್ಯಾರ್ಥಿಗಳು ತಮ್ಮ ಗುರುಗಳಿಗೆ ತುಂಬಾ ನಿಷ್ಠೆಯಿಂದಿದ್ದಾರೆ. ಒಟ್ಟು ಮೂವರು ನುರಿತ ಸ್ಥಪತಿಗಳಿದ್ದು ಅವರು ಎಲ್ಲ ರೀತಿಯಿಂದಲೂ ನಿಷ್ಣಾತರಾಗಿದ್ದಾರೆ. ವಿದ್ಯಾರ್ಥಿಗಳಲ್ಲಿ ಗುರುಗಳ ಬಗ್ಗೆ ನಿಷ್ಠೆ ಎಷ್ಟು ಇದೆಯೋ ಅಷ್ಟೇ ಪ್ರೇಮ ಹಾಗೂ ಮಮತೆ ಈ ಗುರುಗಳಲ್ಲಿದೆ. ಈ ಬಗ್ಗೆ ಇಲ್ಲಿಯ ವಿದ್ಯಾರ್ಥಿಗಳಾದ ಎಸ್. ರಮೇಶ (ಮೊದಲನೇವರ್ಷ) ಕೆ. ಕೆ. ಹರಿನಾಥ ರೆಡ್ಡಿ (ಎರಡನೇವರ್ಷ) ಆರ್. ಕಸ್ತೂರಿ ರಂಗನ್ (3ನೇವರ್ಷ) ಮತ್ತು ಆರ್. ಲಕ್ಷ್ಮೀ ನರಸಿಂಹನ್ (4ನೇ ವರ್ಷ) ಇವರುಗಳು ತುಂಬಾ ಹೆಮ್ಮೆಯಿಂದ ಹೇಳುವ ಮಾತು ನಿಜಕ್ಕೂ ಎಂಥವರನ್ನೂ ಆನಂದಗೊಳಿಸುತ್ತದೆ.

## ವಿದ್ಯಾಭ್ಯಾಸ ಕ್ರಮ

ಇಲ್ಲಿಯ ವಿದ್ಯಾಭ್ಯಾಸ ಕ್ರಮ ತಮಿಳುನಾಡಿನ ಮಹಾಬಲಿಪುರಂನ ಶಿಲ್ಪಕಲಾ ಶಾಲೆಯ ವಿದ್ಯಾ

ತಿರುಮಲೆ–ತಿರುಪತಿ ದೇವಸ್ಥಾನಗಳು ಅನೇಕ ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಸಂಸ್ಥೆಗಳನ್ನು ನಡೆಸುತ್ತಿದೆ. ಅವುಗಳ ಪರಿಚಯ, ಸಾಧನೆಗಳನ್ನು ಜಗತ್ತಿಗೆ ಈ ಪುಟಗಳ ಮೂಲಕ ನೀಡುವ ಉದ್ದೇಶ ಸಪ್ತಗಿರಿಗೆ. ಮೊದಲನೆಯದಾಗಿ ಶ್ರೀ ವೆಂಕಟೇಶ್ವರ ಶಿಲ್ಪಕಲಾಶಾಲೆ.




ಆಂಡಾಳ್–ಚಿತ್ರ; ಆರ್. ಕಸ್ತೂರಿ,3ನೇವರ್ಷದ ವಿದ್ಯಾರ್ಥಿ

ಭ್ಯಾಸಕ್ರಮವನ್ನೆ ಬಹುವಾಗಿ ಹೋಲುತ್ತದೆ. ಆಡಳಿತವರ್ಗದ ಮುರಳೀಧರ್ ಅವರು ನೀಡಿದ ವಿವರಣೆಯಿಂದ ಇದು ತಿಳಿದುಬಂದಿತು. ಕಲಾಶಾಲೆಯ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್. ಕಾಳೀಪ್ರಸಾದರಿಗಂತೂ ತಮ್ಮ ಶಿಷ್ಯರೆಂದರೆ ತುಂಬ ಅಚ್ಚುಮೆಚ್ಚು. ಇವರು ಈ ಕಲಾಶಾಲೆಯಲ್ಲಿಯೇ ವಿದ್ಯಾಭ್ಯಾಸ ಪಡೆದು ನುರಿತವರು. ಇವರಿಗೆ ಸಹಾಯಕರಾಗಿ ಶ್ರೀ ಬಾಬೂನಾಥ್ ಎಂಬುವರೂ ಇರುವರಲ್ಲದೇ, ತುಂಬ ಹಿರಿಯರೂ ಮತ್ತು ಮಹಾಬಲಿಪುರದಲ್ಲಿ ನುರಿತವರೂ ಆದ ಶ್ರೀರಾಮನಾಥಾಚಾರಿ ಎಂಬವರೂ ಮಕ್ಕಳ ಮನಸ್ಸಿಗೆ ಒಪ್ಪುವಂತೆ ಬೋಧಿಸುತ್ತಿದ್ದಾರೆ. ದೈವ ಭಕ್ತಿ ಧರ್ಮನಿಷ್ಠೆಗಳ ಅಡಿಪಾಯದ ವಿದ್ಯಾಭ್ಯಾಸ ಕ್ರಮ ಇಲ್ಲಿ ಕಾಣಬರುತ್ತದೆ.

ವೈಖಾನಸ ಮತ್ತು ಪಾಂಚರಾತ್ರಾಗಮಗಳೆರಡರ ರೀತಿಯ ಶಿಲ್ಪಶಾಸ್ತ್ರದ ಅಭ್ಯಾಸ ಮಾಡಿಸಲಾಗುತ್ತಿದೆ. ದೇವಾಲಯ ಕಟ್ಟಡಗಳ ರೀತಿ ನೀತಿಗಳ ಬಗ್ಗೆಯೂ ವಿದ್ಯಾರ್ಥಿಗಳಿಗೆಮನದಟ್ಟುಮಾಡಿ ಕೊಡಲಾಗುತ್ತಿದೆ. ಶಿಲ್ಪಿಯಾಗಬೇಕಾದವನು ಯೋಗ್ಯ ನುರಿತ ಚಿತ್ರಕಲಾವಿದ ಕೂಡ ಆಗಬೇಕಾಗಿರುವುದು ಅನಿವಾರ್ಯ. ಇಲ್ಲಿಯ ವಿದ್ಯಾರ್ಥಿಗಳು ಬಿಡಿಸಿರುವ ಚಿತ್ರಗಳು ತುಂಬ ಸುಂದರ, ಅಮೋಘ.

ಶ್ರೀ ಕಾಳೀ ಪ್ರಸಾದರು ನೀಡಿದ ಅಂಶಗಳಂತೆ ಇಲ್ಲಿ ಕಾಶ್ಯಪ ಶಿಲ್ಪಶಾಸ್ತ್ರ, ಮಯಮತ ಮತ್ತು ವಿಶ್ವಕರ್ಮೀಯ ಶಿಲ್ಪಶಾಸ್ತ್ರಗಳನ್ನು ಅಭ್ಯಾಸ ಮಾಡಿಸಲಾಗುತ್ತಿದೆ. ಮರೀಚಿ ಸಂಹಿತೆಯನ್ನು ಅನುಸರಿಸಲಾಗುತ್ತದೆ. ಪಠ್ಯಪುಸ್ತಕಗಳು ಸಂಸ್ಕೃತ ಮತ್ತು ತಮಿಳುಭಾಷೆಗಳಲ್ಲಿದ್ದು ಅವುಗಳನ್ನು ಗುರುಗಳೇ ಹೊಂದಿದ್ದು ವಿದ್ಯಾರ್ಥಿಗಳಿಗೆ ಅಭ್ಯಾಸ ಮಾತ್ರ ಮಾಡಿಸಲಾಗುತ್ತಿದೆ.

ವಿದಾರ್ಥಿಗಳಿಗೆ ಸಂಸ್ಕೃತದಜ್ಞಾನ ಇರಲೇಬೇಕೆಂಬ ಉದ್ದೇಶದಿಂದ ಈಗ ಈ ಶಾಲೆಯಲ್ಲಿ ಒಬ್ಬ ಸಂಸ್ಕೃತ ಪಂಡಿತರನ್ನು ನೇಮಿಸಲಾಗುತ್ತಿದೆ.

ಇಲ್ಲಿ ಇಂಥದೇ ವಿಶೇಷ ಶಿಕ್ಷಣ ಎಂಬುದೇನಿಲ್ಲ. ವಿದ್ಯಾರ್ಥಿಗಳಿಗೆ ಪ್ರಸಕ್ತ ಎಲ್ಲ ರೀತಿಯ ಪ್ರಚಲಿತ ಶಿಲ್ಪ ಶಾಸ್ತ್ರದ ಪರಿಚಯ ಮಾಡಿಕೊಡಲಾಗುತ್ತಿದೆ.

ಈ ಶಿಲ್ಪ ಕಲಾಶಾಲೆಯನ್ನು ಸಂದರ್ಶಿಸಿದಾಗ ಉಳಿ, ಶಿಲೆ, ಸುತ್ತಿಗೆಗಳ ಮಧುರಧ್ವನಿಯ ಪ್ರವರದಲ್ಲಿ ತಲ್ಲೀನರಾಗಿದ್ದ ವಿದ್ಯಾರ್ಥಿಗಳು ಲವಲವಿಕೆಯಿಂದ ಇದ್ದುದು ಕಂಡು ಬಂತು. ಶಿಲೆಗಳಲ್ಲಿ ಶ್ರೀ ವೆಂಕಟೇಶ್ವರ, ಶ್ರೀದೇವಿ, ಆಂಡಾಳ್, ದ್ವಾರಪಾಲಕರು ಮೊದಲಾದ ಆಕಾರಗಳು ರೂಪಿತವಾಗತೊಡಗಿದ್ದವು.

## ಶಿಲ್ಪಗಳು

ದೈವಶಿಲ್ಪ ನಿರ್ಮಾಣಕ್ಕೆ ಅನುಕೂಲವಾದ ವಿಶಿಷ್ಟ ಶಿಲೆಯ ಅಗತ್ಯವಿದೆ. ಅದನ್ನು ಈ ಶಾಲೆಯವರು ವಾಲಾಜಾಬಾದ್‌ನ ಸನಿಹದ ಕೇಂದ್ರವೊಂದರಿಂದ ತರುತ್ತಿದ್ದಾರೆ. ಶಿಲೆ ತುಂಬಾ ಮೂಲ್ಯವುಳ್ಳದ್ದು ಹೌದು.

ಇಲ್ಲಿ ವಿದ್ಯಾರ್ಥಿಗಳು ತಯಾರಿಸಿದ ಶಿಲ್ಪಗಳು ಅನೇಕ. ಶ್ರೀಕೃಷ್ಣ, ಆಂಜನೇಯ, ಶ್ರೀದೇವಿ, ಶ್ರೀ ಆಂಡಾಳ್ ಮೊದಲಾದ ಸುಂದರ ಶಿಲ್ಪಗಳನ್ನು ಮಾರಾಟಕೂಡ ಮಾಡಲಾಗುತ್ತಿದೆ ಎಂದು ತಿಳಿದು ಬಂದಿತು. ತಿರುಮಲೆ-ತಿರುಪತಿ ದೇವಾಲಯದವರು ರಾಷ್ಟ್ರದ ಅನೇಕ ದೇವಾಲಯಗಳಿಗೆ ಅನೇಕ ಮೂರ್ತಿಗಳನ್ನು ದಾನವಾಗಿ ಕೂಡ ಕೊಡಮಾಡಿದ್ದಾರೆ. ಮಾಡುತ್ತಿದ್ದಾರೆ. ಅಂಥ ಸುಂದರ ಭವ್ಯ ಶಿಲ್ಪ ವಿಗ್ರಹಗಳನ್ನು ಈ ಲೇಖಕ ಕಂಡು ಆನಂದಿಸುವ ಸೌಭಾಗ್ಯಲಭಿಸಿದ್ದು ಒಂದು ಅಪೂರ್ವವೇ ಸರಿ.

## ನಿಬಂಧನೆಗಳು

ಈ ಕಲಾ ಶಾಲೆಗೆ ಸೇರಲು ಜಾತಿಮತಗಳ ಭೇದವಿಲ್ಲ. ಯಾವ ಮತಸ್ಥನೇ ಆದರೂ ಸೇರಬಹುದು. ಆದರೆ 15 ರಿಂದ 22 ವರ್ಷವಯಸ್ಸಾಗಿರಬೇಕು. ಕೊನೆಯಪಕ್ಷ ಎಂಟನೇ ತರಗತಿಯಲ್ಲಿ ಶೇ 40 ರಷ್ಟು ಅಂಕಪಡೆದು ಉತ್ತೀರ್ಣನಾಗಿರಬೇಕು. ಶಿಲ್ಪಾಚಾರ್ಯ ವಂಶಸ್ಥನಾಗಿದ್ದಲ್ಲಿ ಅಂಥವನಿಗೆ ವಯಸ್ಸಿನಲ್ಲಿ ರಿಯಾಯಿತಿ ತೋರಲಾಗುವುದು. ಉಳಿದಂತೆ ಇಲ್ಲಿ ಎಲ್ಲರೂ ಸಮಾನರೇ. ವಿದ್ಯಾರ್ಥಿಯು ತಾನು ಕಲಿಯಲಿರುವ ವಿಷಯದಲ್ಲಿ ಆಸಕ್ತಿ ಹೊಂದಿದ್ದರೆ ಸಾಕು.

ವಿದ್ಯಾರ್ಥಿಗಳಿಗೆ ವಾಸಿಸಲು ಉಚಿತ ಕೋಣೆಗಳಲ್ಲದೆ ದೀಪ, ನೀರು, ಅಡಿಗೆ ಮಾಡಿಕೊಳ್ಳುವ ಸೌಲಭ್ಯಗಳನ್ನು ಒದಗಿಸಲಾಗಿದೆ. ದೇವಸ್ಥಾನದ ಆಸ್ಪತ್ರೆಯಲ್ಲಿ ಉಚಿತ ವೈದ್ಯಕೀಯ ಸೇವೆ ಪಡೆಯ ಬಹುದು. ಅಲ್ಲದೆ ವರ್ಷಕ್ಕೆ 12 ದಿವಸಗಳಷ್ಟು ಕ್ಯಾಷ್ಯುಯಲ್ ರಜೆಯೂ ಉಂಟು. ಹಬ್ಬ ಹುಣ್ಣಿಮೆಗಳು ಬಂದಾಗ ಊರಿಗೆ ಹೋಗಿಬರಲು ಅನುಕೂಲಿಸುವಂತೆ ಒಟ್ಟು ಹತ್ತು ದಿನಗಳವರೆಗೂ ಅನುಮತಿ ಆಧಾರದಮೇಲೆ ರಜೆ ಕೊಡಲಾಗುತ್ತದೆ. ಅನಾರೋಗ್ಯವಾಗಿ ಮಲಗಿದಾಗ 1 ತಿಂಗಳಷ್ಟು ವೈದ್ಯಕೀಯ ರಜೆಯನ್ನೂ ಕೊಡಲಾಗುತ್ತದೆ.

ತಿರುಮಲೆ ತಿಮ್ಮಪ್ಪನ ಆಶ್ರಯದಲ್ಲಿ ನಡೆಯುತ್ತಿರುವ ಅಸಂಖ್ಯ ಜನೋಪಕಾರೀ ಕೆಲಸಗಳಲ್ಲಿ ಇದೊಂದು ಅಣುಮಾತ್ರ. ಉಳಿದಂತೆ ನಡೆಯುತ್ತಿರುವ ಅಂಥ ಕೆಲಸಗಳನ್ನು ಕ್ರಮೇಣ ಸಾರ್ವಜನಿಕರಿಗೆ ಪರಿಚಯಿಸಲಾಗುತ್ತದೆ.



ಲತಾಂಗಿ–ಚಿತ್ರ: ಆರ್. ಲಕ್ಷ್ಮೀನರಸಿಂಹನ್,
4 ನೇ ವರ್ಷದ ವಿದ್ಯಾರ್ಥಿ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.







# ಹೆಳವನ ಕಟ್ಟೆ ಗಿರಿಯಮ್ಮ

ಸರ್ವಶಕ್ತನಾದ ಭಗವಂತನನ್ನು ಭಕ್ತರನೇಕರು ಹಲವು ವಿಧಗಳಿಂದ ಸ್ತುತಿಸಿ ಧ್ಯಾನಿಸಿ ಕೃತಾರ್ಥರಾಗಿರುವರು. ಅಕ್ಕಮಹಾದೇವಿಯ ಪಾಲಿಗೆ ಪರಶಿವನು ಅವಳ ಪತಿಯೇ ಆದರೆ ಶೂಡಿಕ್ಕೊಡುತ್ತ ನಾಚ್ಚಿಯಾರ್ ಎಂಬ ಅಭಿಧಾನಕ್ಕೆ ಪಾತ್ರಳಾದ ಆಂಡಾಳ್ ಅಥವಾ ಗೋದಾದೇವಿಗೆ ಆ ಶ್ರೀರಂಗನಾಥನೇ ವರನಾದನು. ಜಗತ್ತಿನ ಜನರಿಗೆ ಈ ದೈವಿಕ ವಿವಾಹವು ತಿಳಿಯಲೆಂದು ಗೋದಾದೇವಿಯ ತಂದೆ ವಿಷ್ಣುಚಿತ್ತರು ಈ ಮದುವೆಯನ್ನು ನಡೆಸಿಕೊಟ್ಟು, ಅವಳು ಪರಮಾತ್ಮನಲ್ಲಿ ಐಕ್ಯಹೊಂದುವಂತೆ ಮಾಡುತ್ತಾರೆ. ರಾಧೆಯು ಕೃಷ್ಣನನ್ನು ತನ್ನ ಸಖನನ್ನಾಗಿ ಆರಾಧಿಸಿ ಸಾಯುಜ್ಯ ಪಡೆದಂತೆ ಗಿರಿಯಮ್ಮನು ಅವನನ್ನು ಪುತ್ರನಂತೆ ವರಿಸಿ ರಮಿಸಿ ತನ್ನ ಜನ್ಮದ ಸಾರ್ಥಕತೆಯನ್ನು ಕಂಡುಕೊಂಡವಳು. ಇಂತಹ ಗಿರಿಯಮ್ಮನು ತನ್ನ ಭಕ್ತಿ ಪರಾಕಾಷ್ಠತೆಯನ್ನು ಮುಟ್ಟುವಲ್ಲಿ ಕನ್ನಡ ಕೀರ್ತನ ಸಾಹಿತ್ಯದ ಮಜಲುಗಳನ್ನು ವಿಸ್ತರಿಸಿದಳು.

ಇವಳಿಗೆ ಹೆಳವನ ಕಟ್ಟೆ ಗಿರಿಯಮ್ಮನೆಂದು ಹೆಸರಿದೆ. ಕಾರಣ ಹೆಳವನೋರ್ವನು ಕಟ್ಟಿದ ಕೆರೆಯ ಪಕ್ಕದಲ್ಲಿನ ಹುತ್ತದಲ್ಲಿದ್ದ ವಿಗ್ರಹಗಳನ್ನು ಹೊರತಂದು ಅಲ್ಲಿ ದೇವಸ್ಥಾನವನ್ನು ನಿರ್ಮಿಸಿದರು. ಅದು ಮುಂದೆ ರಂಗನಾಥ ಕ್ಷೇತ್ರವೆಂದು ಪ್ರಸಿದ್ಧಿಯಾಯಿತು. ರಂಗನಾಥನನ್ನು ತನ್ನ ಆರಾಧ್ಯದೈವವನ್ನಾಗಿ ಮಾಡಿಕೊಂಡು ಆ ಸ್ವಾಮಿಯ ಅಂಕಿತದಿಂದಲೇ ತನ್ನ ಕೀರ್ತನೆಗಳನ್ನು ಹಾಡಿರುವುದರಿಂದ ಇವಳಿಗೆ ಹೆಳವನಕಟ್ಟೆ ಗಿರಿಯಮ್ಮನೆಂದು ಹೆಸರು ಬಂದಿರಬಹುದು.

ನರಹರಿ ತೀರ್ಥರಿಂದ ಮೊದಲ್ಗೊಂಡು ಪ್ರಾರಂಭವಾದ ದಾಸಸಾಹಿತ್ಯವು ಒಂದು ಪರಂಪರೆಯಾಗಿ ವ್ಯವಸ್ಥಿತವಾಗಿ ಬೆಳೆದು ಒಂದು ಸಮರ್ಥವಾದ ದಾಸ ಸಾಹಿತ್ಯದ ಸಂಪ್ರದಾಯವನ್ನೇ ಕರ್ನಾಟಕದಲ್ಲಿ ಹುಟ್ಟುಹಾಕಿತು. ದಾಸ ಸಾಹಿತ್ಯದಲ್ಲಿ ಹೆಸರಾಂತರಾದ ಗೋಪಾಲದಾಸರ ನಂತರ ಅವರ ಅನುಗ್ರಹಕ್ಕೆ ಪಾತ್ರಳಾಗಿ ಈ ಸಾಹಿತ್ಯವನ್ನು ಮುಂದುವರೆಸಿದಳು ಗಿರಿಯಮ್ಮ.

ರಾಣಿಬೆನ್ನೂರಿನ ಭಿಷ್ಟಪ್ಪ ಎಂಬುವರ ಮಗಳಾಗಿ ಜನಿಸಿದ ಗಿರಿಯಮ್ಮನಿಗೆ ಕಿಶೋರ ಪ್ರಾಯದಿಂದಲೇ ರಂಗನಾಥ ಸ್ವಾಮಿಯ ಬಗೆಗೆ ಅತೀವವಾದ ಭಕ್ತಿ ಗೌರವಗಳಿದ್ದವು. ಪ್ರಾಪ್ತ ವಯಸ್ಕಳಾದ ನಂತರ ಇವಳನ್ನು ಮಲೇಬೆನ್ನೂರಿನ ಶ್ಯಾನುಭೋಗ ತಿಪ್ಪರಸನಿಗೆ ವಿವಾಹ ಮಾಡಿಕೊಡುತ್ತಾರೆ. ಲೌಕಿಕವಾದ ಈ ಸಂಸಾರ ಬಂಧನಗಳಲ್ಲಿ ಸಿಲುಕಿಕೊಳ್ಳಲು ಇಚ್ಛಿಸದೆ ಪತಿ



ಹಾಗೂ ಅತ್ತೆ ಮಾವಂದಿರಿಗೆ ತಿಳಿಹೇಳಿ ತನ್ನ ಆರಾಧ್ಯದೈವದ ಆರಾಧನೆಗೆ ಅವಕಾಶ ಮಾಡಿಕೊಡಿರೆಂದು ದೈನ್ಯದಿಂದ ಪ್ರಾರ್ಥಿಸುತ್ತಾಳೆ. ಅವಳ ಬೇಡಿಕೆಗೆ ಓಗೊಟ್ಟು ರಂಗನಾಥನೇ ಪತಿಯ ಮೂಲಕ ಅತ್ತೆ ಮಾವಂದಿರಿಗೆ ಸಮಾಧಾನ ಹೇಳಿಸಿದ ಅವಳ ಈ ಮಂಗಳಕಾರ್ಯಕ್ಕೆ ಪ್ರೇರಕ ಶಕ್ತಿಯಾಗಿ ನಿಲ್ಲುತ್ತಾನೆ ಪತಿ ತಿಪ್ಪರಸ.

ಉಡುಪಿಯಾತ್ರೆಯ ನಿಮಿತ್ತ ಒಮ್ಮೆ ಗೋಪಾಲ ದಾಸರು ಮಲೇಬೆನ್ನೂರಿಗೆ ಆಗಮಿಸುತ್ತಾರೆ. ಅವರ ಪೂಜಾಕೈಂಕರ್ಯದಲ್ಲಿ ಗಿರಿಯಮ್ಮನು ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾಳೆ. ಅಂದು ಅವರು ನೀಡಿದ ಪರಮಾತ್ಮನ ಪ್ರತೀಕವನ್ನು ಉಪಾಸಿಸಲು ಪ್ರಾರಂಭಿಸುತ್ತಾಳೆ. ಸತಿಯ ಸಾಧನೆಗೆ ಪತಿ ತಿಪ್ಪರಸ ಸಹಾಯಕನಾಗಿ ಸಹಕಾರ ಕೊಡುತ್ತಾನೆ. ಪತಿಸೇವೆ ಮಾಡಿ ಸಾರ್ಥಕ್ಯ ಹೊಂದಿದ ಪತಿವ್ರತೆಯರು ಪ್ರಪಂಚದಲ್ಲಿರಬಹುದು. ಆದರೆ ಪತಿಸಾನ್ನಿಧ್ಯದಲ್ಲಿ ಸಾಯುಜ್ಯ ಕಾಣುವ ತೃಪ್ತಿಯನ್ನು ಹೊಂದುವ ಇಂತಹ ಸತಿವ್ರತರೆಷ್ಟು ಮಂದಿ ಇರಬಹುದು ?

ಗಿರಿಯಮ್ಮನು ತನ್ನ ಪತಿಯ ಏಕಾಂಗಿ ಬದುಕಿಗೆ ಇತಿಶ್ರೀ ಹಾಡಲು ಇಚ್ಛಿಸಿ ಅವನೂ ಎಲ್ಲರಂತೆ ಸಾಂಸಾರಿಕ ಸುಖಗಳನ್ನು ಪಡೆಯಬೇಕೆಂಬ ಉದ್ದೇಶದಿಂದ ತನ್ನ ಪತಿಗೆ ಮತ್ತೊಂದು ಹೆಣ್ಣನ್ನು ತಂದು ತಾನೇ ನಿಂತು ಮದುವೆ ಮಾಡಿಸುತ್ತಾಳೆ. ಸೊಸೆಯ ರೀತಿ ನೀತಿ ಅತ್ತೆಮಾವಂದಿರಿಗಷ್ಟೇ ಅಲ್ಲದೆ ಎಲ್ಲ ಜನರಿಗೂ ಅಚ್ಚರಿಯೆನಿಸಿ ಮೆಚ್ಚುಗೆಯನ್ನೂ ಪಡೆಯುತ್ತದೆ.

ಸುಮತೀಂದ್ರ ಸ್ವಾಮಿಗಳು ಸಂಚಾರ ಮಾರ್ಗದಲ್ಲೊಮ್ಮೆ ಗಿರಿಯಮ್ಮನಿರುವ ಗ್ರಾಮಕ್ಕೆ ಬಂದಾಗ ಒಳಿತನ್ನು ನೋಡಿ ಕರುಬುವ ಮಂದಿ ಗಿರಿಯಮ್ಮನನ್ನು ಅಪಮಾನಿಸಲೆಂದು ಸಲ್ಲದ ಆಪಾದನೆಗಳನ್ನು ಅವರ ಮುಂದಿಡುತ್ತಾರೆ. ಸಂಸಾರ ಮಾಡದ ತಾಯಿಯಾಗದ ಇಂಥವಳನ್ನು ದೇವಸ್ಥಾನಕ್ಕೆ ಸೇರಿಸುವುದಾಗಲೀ ಸ್ವಾಮಿಗಳಿಂದ ತೀರ್ಥ ಪಡೆಯುವುದಾಗಲೀ ಕೂಡದೆಂದು ನಿರ್ಧರಿಸುತ್ತಾರೆ. ಪೂಜೆ ಮಂಗಳಾರತಿಗಳಾದ ಮೇಲೆ ಸ್ವಾಮಿಗಳು ಗಿರಿಯಮ್ಮನನ್ನು ಕರೆಯುತ್ತಾರೆ. ತೀರ್ಥಕ್ಕಾಗಿ ಕೈ ಚಾಚಿದ ಅವಳ ಹಸ್ತವನ್ನು ಕಂಡು, ದೇವಕಿಯ ಕೈಲಕ್ಷಣವೆಂದು ನೀನು ಯಶೋದೆಯಂತೆ ತಾಯಿ, ಎಂದು ಆಶ್ಚರ್ಯ ಚಕಿತರಾಗುತ್ತಾರೆ. ಸುತ್ತಲ ಜನರಿಗೆ ಗಿರಿಯಮ್ಮನು ಮಕ್ಕಳನ್ನು ಹೆರದ ಬಂಜೆಯಾದರೆ,

---

**ಶ್ರೀಮತಿ ಎಸ್. ವಿ. ಹೇಮಾವತಿ**

---

ಸ್ವಾಮಿಗಳು ಜಗದ್ರಕ್ಷಕನಾದ ಕೃಷ್ಣನನ್ನು ಪಡೆದ ದೇವಕಿಯ ಅಂಶ ಇವಳೆಂದು ತಿಳಿಯುತ್ತಾರೆ. ನಿನ್ನಂತಹ ಪುಣ್ಯಾತ್ಮಳ ದರ್ಶನ ಭಾಗ್ಯ ಸಿಕ್ಕಿದುದು ತಮ್ಮ ಪುಣ್ಯವೆಂದು ಹರ್ಷಚಿತ್ತರಾದಾಗ ದೂರಿತ್ತ ಜನರ ಸೊಲ್ಲೇ ನಿಂತುಹೋಗುತ್ತದೆ. ಮುದ್ದು ಮೋಹನನ ಮೂರ್ತಿಯನ್ನು ಅಂದವಾದ ರಂಗವಲ್ಲಿಯ ಚಿತ್ರ ಬರೆದು ಕುಳ್ಳಿರಿಸಿ ಹಾಡಿ ಪೂಜಿಸುತ್ತಾಳೆ. ವ್ಯಾಸರಾಯರಿಗೆ ಕನಕದಾಸರು ಪರಮಾತ್ಮನನ್ನು ತೋರಿಸಿದಂತೆ ನೀನು ನನಗೆ ಬಾಲಗೋಪಾಲನ ದರ್ಶನ ಮಾಡಿಸಿ ಪುನೀತ ಳಾದೆ ಎಂದು ಅಭಿನಂದಿಸುತ್ತಾರೆ.

ಬಿಡಿಬಿಡಿಯಾದ ಅನೇಕ ಕೀರ್ತನೆಗಳನ್ನು ರಚಿಸಿರುವುದರೊಂದಿಗೆ ಇತರ ಏಳು ಕೃತಿಗಳನ್ನು ಬರೆದಿರುವಳು. ಇವುಗಳಲ್ಲಿ ಕೃಷ್ಣಕೊರವಂಜಿ ಮೊದಲನೆಯದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇದರಲ್ಲಿ ಕೃಷ್ಣರುಕ್ಮಿಣಿಯರ ವಿವಾಹದ ನಡುವೆ ಕೃಷ್ಣ ಕೊರವಂಜಿ ವೇಷ ಧರಿಸಿ ರುಕ್ಮಿಣಿಗೆ ಧೈರ್ಯ ಹೇಳುವ ಪ್ರಸಂಗ ಇಲ್ಲಿ ಬಂದಿದೆ.

ಶುಕ್ಲಾಂಬರವನುಟ್ಟ ಚಕ್ರಧರಗೆ ನಮಿಸಿ
ವಕ್ರ ಬುದ್ಧಿಯ ತಿದ್ದಿಕೊಂಬೆ ನಾನು

ಎಂಬ ಪ್ರಾರ್ಥನಾಪದ್ಯದೊಂದಿಗೆ ತನ್ನ ಕೃತಿಯ ಮುನ್ನಡೆಸೆಂದು ಕೇಳುತ್ತ

ಭಾರತೀದೇವಿ ನೀ ಸಾರಥಿಯಾಗಮ್ಮ
ಸೇರುವೆ ಚರಣ ಕಮಲ ನಿಮ್ಮ
ನಂದಿವಾಹನದೇವ ವಂದಿಸುವೆನು ನಿಮಗೆ

ಎಂದು ಮುಂದುವರಿಯುವಳು.

ರುಕ್ಮಿಗೆ ತನ್ನ ತಂಗಿಯಾದ ರುಕ್ಮಿಣಿಯನ್ನು ಜರಾಸಂಧನಿಗೆ ಕೊಡಬೇಕೆಂಬ ಇಚ್ಛೆಯಿದ್ದರೆ, ರುಕ್ಮಿಣಿಗೆ ಕೃಷ್ಣನನ್ನೇ ಪಡೆಯಬೇಕೆಂಬ ಹಂಬಲ ಮನದಲ್ಲಿ. ಆಗ ಆ ಪರಮಾತ್ಮನೇ ಕೊರವಂಜಿ ವೇಷ ಧರಿಸಿ ರುಕ್ಮಿಣಿಯ ಬಳಿಗೆ ಬರುತ್ತಾನೆ. ಅವಳ ರೂಪವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾಳೆ.

ಕೊರವಿ ಹುಬ್ಬಿನ ಕೂಟ । ಧರೆಗೆ ಚಾಪದ
ನೋಟ
ಗುಲಗಂಜಿ ಸರಗಳು ಎದೆಯಲಿ ಅಲೆಯುತ
ಹೆಬ್ಬಾಗಿಲದೊಳ್ ಹುಬ್ಬುಗಳ ಕುಣಿಸು
ಅಬ್ಬರದಿಂದ ಸ್ವರಗೈಯುತ್ತಾ–
ಎಲ್ಲರನ್ನೂ

ಬನ್ನಿರೆಂದು ಕೂಗುತ್ತಾ ರುಕ್ಮಿಣಿಯ ಅಂತಃ ಪುರ ವನು ಹೊಕ್ಕು

ಅಂಗವಂಗ ಕಾಳಿಂಗ ಕಾಶ್ಮೀರ ದೇಶ
ಹಿಂಗದೆ ತಿರುಗಿ ಬಂದೆನೆ ಧುಂಡಿ

ಅಂಜದಿರು ಕಂಜಲೋಚನೀ ಮಂಜು ನಿ
ನ್ನಂಜಿಕೆ ಪರಿಹಾರ ಸಂಜೀವಿನೀ–

ಎಂದು ಧೈರ್ಯದ ಆಶ್ವಾಸನೆಯನ್ನು ಕೊಡುತ್ತಾಳೆ. ಹೀಗೆ ಕೊರವಂಜಿಯ ವೈವಿಧ್ಯ ಪೂರ್ಣ ರೂಪ ಧರಿಸಿದ ಭಗವಂತನ ವರ್ಣನೆ ಯನ್ನು ಸ್ವಾರಸ್ಯವಾಗಿ ಚಿತ್ರಿಸಿದ ಕೀರ್ತಿ ಗಿರಿಯ ಮ್ಮನಿಗೆ ಸೇರುತ್ತದೆ.

ಮೊದಲ ಕೃಷ್ಣ ಕೊರವಂಜಿಯನ್ನೇ ಹೋಲುವ ಮತ್ತೊಂದು ಕೃತಿ ಬ್ರಹ್ಮ ಕೊರವಂಜಿ, ಗಿರಿಯ ಮ್ಮನ ಎರಡನೇ ರಚನೆ. ಅಲ್ಲಿ ಕೃಷ್ಣ ಕೊರವಂಜಿ ವೇಷ ಧರಿಸಿ ಬಂದು ರುಕ್ಮಿಣಿಗೆ ಧೈರ್ಯ ಹೇಳಿ ದರೆ ಇಲ್ಲಿ ಸ್ವತಃ ಬ್ರಹ್ಮನೇ ವೇಷಧಾರಿಯಾಗಿ ಆಗಮಿಸಿ ದೇವಕಿಗೆ ಅಭಯ ನೀಡುತ್ತಾನೆ.

ಕೃತಿಗೆ ಮೊದಲು ಸಿರಿವೆಂಕಟೇಶ ಪಾದ
ಪದ್ಮಗಳನು ನೆನೆಯುತ್ತ
ಸುರರು ಕಿನ್ನರರು ಸ್ಮರಣೆ ಮಾಡಿದ ಪಾದ
ಕುರುಪತಿಯ ಗರುವವನು ಪರಿಹರಿಪ ಪಾದ
ಪರಮ ಯೋಗಿಗಳ ಹೃತ್ಕಮಲದೊಳಿಹ
ಪಾದ

ಎಂದು ಸ್ತುತಿಸಿ ಕಾವ್ಯ ಹಾದಿಯನ್ನು ಕ್ರಮಿಸು ತ್ತಾಳೆ. ದೇವಕಿಯನ್ನು ವಸುದೇವನಿಗೆ ಕೊಟ್ಟು ವಿವಾಹ ಮಾಡುತ್ತಾನೆ ದೇವಕಿಯ ಅಣ್ಣ ಕಂಸ. ಆದರೆ ವಿವಾಹ ಸಮಯದಲ್ಲಾದ ಅಶರೀರವಾಣಿ ಯಿಂದ ಭೀತನಾದ ಕಂಸ ಆ ದಂಪತಿಗಳನ್ನು ಸೆರೆಯಲ್ಲಿಡುತ್ತಾನೆ. ಆಗ ಬ್ರಹ್ಮನು ಕೊರವಂಜಿ ವೇಷ ಧರಿಸಿ ಬಂದು ಅವರ ಕಷ್ಟ ನಿವಾರಣೆಯಾಗು ವುದೆಂದೂ ಮುಂದೆ ಅವಳ ಗರ್ಭದಿಂದ ಜನಿಸಿ ಬರುವವನು ಪರಮಾತ್ಮನೆಂಬ ಸೂಚನೆಯನ್ನೂ ಕೊಡುತ್ತಾನೆ. ಕೊರವಂಜಿಯ ಆಗಮನವಾ ಗುತ್ತದೆ.

ಗುಂಜಿದಂಡೆಯ ತೋಳು ಭಾಪುಹುಲ್ಲರೆ
ಕಟ್ಟಿ ವೀಳ್ಯವು
ಮುಂಜಟಿಯ ಸರ ಹವಳ ಸರಗಳಾ ಸರವು
ಕೊರಳಲಲೆಯುತಾ ಆದಳೇ ಕೊರವಿ ।
ಮುತ್ತುಮಾಣಿಕ ಹೊನ್ನಗೊಡೆಯ ಪಿಡಿದು
–ಬಂದು

ತಾನು ಛಪ್ಪನ್ನೈವತ್ತಾರು ದೇಶ ಸುತ್ತಿ ಬಂದವಳೆಂದೂ ತಪ್ಪಹೇಳುವ ಕೊರವಿ ತಾನಲ್ಲ ವೆಂದು ಹೇಳುತ್ತಾಳೆ. ಹೀಗೆ ವಿನಯದಿ ಸ್ವರಗೈವ ಕೊರವಿಯ ಕಂಡು ದೇವಕಿಯು ಸನ್ನೆಮಾಡಿ ಕರೆಯುತ್ತಾರೆ. ಆಗ ಕೊರವಂಜಿಯು

ಉರ್ವಿಯೊಳಗೆ ಧಿಟ್ಟನಮ್ಮಾ ಅಮ್ಮಯ್ಯಾ
ನಿಮ್ಮ
ಗರ್ಭದೊಳಿಹನು ಕಾಣಮ್ಮಾ ।

ಕಂಟಕ ಕಂಸನ ಅಮ್ಮಾ ಇವ ಪುಟ್ಟಿ
ಗಂಟಲ ಮುರಿವ ಕಾಣಮ್ಮಾ ।

ಎಂದು ಹೇಳಿ 'ಈ ಮಾತು ಹುಸಿಯಲ್ಲ. ಸ್ವಾಮಿ ಸೀತಾಪತಿಯ ಕರುಣೆಯುಂಟೆ'ಂದು ತಿಳಿಸಿ ಹೊರ ಡಲಣಿಯಾಗುವಳು. ಆಗ ದೇವಕಿಯು ಸಂತಸ ದಿಂದ

ಕೊರವಿ ನಿನ್ನ ಮಾತು ಸತ್ಯವಾದರೆನ್ನ
ದುರಿತವು ಹಿಂಗಿದರೆ
ಬಿರುದಿನ ಭಾಪುರೆ ಕೊಡುವೆ ನಿನಗೆಂದು
ಕರದಿ ವೀಳ್ಯವ ನಿಟ್ಟು–

ಸನ್ಮಾನಿಸಿ ಕಳುಹಿಸಿಕೊಡುತ್ತಾಳೆ. ನೀರಜ ಭವನ ಕಟ್ಟಳೆಯನು ಮೀರಬಲ್ಲವರು ಯಾರೂ ಇಲ್ಲವೆಂಬ ಮಾತಿಗೆ ದೃಷ್ಟಾಂತವಾಗಿ ಉದ್ದಾಳಿಕನ ಕಥೆಯನ್ನು ಗಿರಿಯಮ್ಮನು ಬರೆದಿರುವಂತಿದೆ. ಚಂದ್ರವತಿ ಉದ್ದಾಳಿಕರು ವಿಧಿಯ ಒಳಸಂಚಿಗೆ ಬಲಿಯಾಗಿ ಹಲವು ಕಾಲ ಅಗಲಿದ್ದು ನಂತರ ಒಂದಾಗುವ ಈ ಕೃತಿ ಗಿರಿಯಮ್ಮನ ಮೂರನೆಯ ರಚನೆ ಯಾಗಿರಬಹುದು.

ಉದ್ದಾಲಕನು ಎಳೆತನದಿಂದಲೇ ವೈರಾಗ್ಯ ಪಡೆದು ದೇವರನ್ನು ಕುರಿತು ತಪಸ್ಸು ಮಾಡು ತ್ತಿರುತ್ತಾನೆ. ಅನಂತಕಾಲ ನಿರಂತರವಾಗಿ ಅವನ ತಪಸ್ಸು ನಡೆಯುತ್ತಿರುವಾಗ ಇತ್ತ ಅವನ ಪಿತೃಗಳು ಯಮಲೋಕದಲ್ಲಿ ಓತಿನ ಬಾಯ ಮೂಷಿಕದಂತೆ ಯಾತನೆಯನ್ನು ಪಡುತ್ತಿರುತ್ತಾರೆ. ಅದರ ಪರಿಹಾರಕ್ಕೆಂದು ಉದ್ದಾಳಿಕನು ಕೌಶಿಕ ನನ್ನು ಪ್ರಾರ್ಥಿಸಿದಾಗ ಅವರು

ಉತ್ತಮಳಾಗಿರ್ಪ ಸತಿಯನೊಳಗೊಂಡು
ಪುತ್ರ ಸಂತಾನವ ಪಡೆದು ಕ
ಅತ್ರೆಯ ನೊಡಗೊಂಡು ಯಜ್ಞವ ಮಾಡಿದರೆ
ಸತ್ಯ ಅವರಿಗೆ ಸ್ವರ್ಗಲೋಕ
–ಎಂದೆನ್ನುತ್ತಾರೆ.

ಇಲ್ಲಿ ಗಿರಿಯಮ್ಮನು ಉದ್ದಾಳಿಕನ ಮುದಿ ಪ್ರಾಯವನ್ನು ವರ್ಣಿಸುತ್ತಾ

ಬಿಡದೆ ಜರೆಗೆ ನರೆಪರೆಗಳು ಬಂದಾವು
ಸಡಲಿದವು ದಂತ ಪಂಕ್ತಿ
ಕೊಡುವರಾರು ಕನ್ನಿಕೆಯನು ಮುನಿಪನು
ಜಡಭವನ ಬೆಸಗೊಂಡ

ಆಗ ಬ್ರಹ್ಮನು ಚಂದ್ರವತಿಯ ವಿಚಾರ ತಿಳಿ ಸುವನು. ಉತ್ತಮ ರಘುಕುಲದ ರಘುರಾಮನ ಆತ್ಮಜೆ ನಿನ್ನ ಕನ್ನಿಕೆಯಾಗುವಳು. ಪುತ್ರ ಹುಟ್ಟಿದ್ದ ಏಳು ವರ್ಷಕ್ಕೆ ನಿನ್ನ ಪತ್ನಿಯು ಗೋಚರ ವಾಗುವಳೆಂದು ಕಂದ ನಾಸಿಕಕೇತುವೆಂದು ಹೇಳುತ್ತಾನೆ.

ಹಣೆಯ ಲಿಖಿತವನು ಯಾರು ಅರಿಯಬಲ್ಲರು ?
ನಾರಿ ತಾನಾಘ್ರಾಣಿಸಿದಳು
ಏರಿತು ಉತ್ತಮಾಂಗದಲಿ ಆ ಗರ್ಭವು
ನಾರಿ ನಾಭಿಕನುಲಕೆ ಇಳಿದು

ಭೂತಲದಲ್ಲಿ ಅತ್ಯಾಶ್ಚರ್ಯವೆನಿಸುವಂತೆ ಜಾತಿ ಸೂತಕವಿಲ್ಲದೆ ನಾಸಿಕದಿಂದ ಪುತ್ರನುದಿಸುತ್ತಾನೆ. 'ಉದ್ದಾಳಿಕನನ್ನು ಹೆತ್ತ ಮಾತಾಪಿತರು ಚಿತ್ತಹಿಗ್ಗಿ ನಲಿದರೆ' ಪುತ್ರ ಹುಟ್ಟಿದ ನಮ್ಮ ಕುಲದಲೆನುತ ಚಿತ್ತೈಸಿದರ್ ಸ್ವರ್ಗಲೋಕಕೆ ಪಿತೃಗಳೆಲ್ಲರೂ.

ಹೊನ್ನಪುತ್ಥಳಿಯಂತೆ ಥಳಥಳಿಸುವ ಪುಟ್ಟ ಚಿಣ್ಣ ಬೆಳೆಯುತ್ತಾನೆ. ವಿಧಿಯ ಕೈವಾಡದಿಂದ ದೂರಾಗಿದ್ದ ಸತಿ ಸುತರನ್ನು ಅದೇ ವಿಧಿಯ ಕರುಣೆಯಿಂದ ಉದ್ದಾಳಿಕನು ಪಡೆಯುತ್ತಾನೆ.

ಗಿರಿಜೆಯ ವರಸುತ ಕರಿಮುಖ ಗಣಪ ।
ಕಿರುಡೊಳ್ಳಿಗೆ ಉರಗನ ಸುತ್ತಿದ ಪಾಶಾಂಕುಶಧರ

ನನ್ನು ಮೊದಲಿಗೆ ಸ್ತುತಿಸಿ ಕೊನೆಗೆ ವೇದಾಂತ ವೇದ್ಯ ತತ್ತ್ವಜ್ಞಾನ ಕಥೆಯನು ನೋದದಿ ಮಾಡಿದೆ ಕಾವ್ಯದೊಳು ಕುಂದಿರೆ ಓದಿ ತಿದ್ದುವುದು ಸುಜನರು-ಎಂಬುದರೊಂದಿಗೆ ಕೃತಿಗೆ ಮುಕ್ತಾಯ ಹಾಡುತ್ತಾಳೆ.

ಇದೇ ಕವಯಿತ್ರಿಯ ಮತ್ತೊಂದು ಕೃತಿ ಲವ ಕುಶರ ಕಾಳಗ.

ಹರಿಹರ ಬ್ರಹ್ಮ ತ್ರಿಮೂರ್ತಿಗಳ ಬಲಗೊಂಬೆ
ಗುರು ಸತ್ಯಬೋಧರ ನೆನೆದು
ಅಜನ ಪಟ್ಟದರಾಣಿ ಸರಸ್ವತಿ ಬಲಗೊಂಡು
ತೊಡಗುವೆ ರಾಮನ ಕಥೆಯಾ ।

ಎಂದು ಸುವರ್ಣ ದಕ್ಷಿಣೆಯ ತಾಂಬೂಲವನು ಉಮಾಮ್ಮಯ ಪುತ್ರ ಗಣೇಶನಿಗರ್ಪಿಸಿ ಲವಕುಶರ ಕಥೆಗೆ ನಾಂದಿಯನ್ನು ಹೇಳುತ್ತಾಳೆ.

ಸೀತೆಯು ರಾವಣನ ಪಟ ಬರೆದು ಆದರಿಂದಲೇ ತನಗೆ ವಿನಾಶ ಉಂಟಾಗುವಂತೆ ಮಾಡಿಕೊಳ್ಳುವ ಪಟದ ಸಂಧಿಯ ವಿವರಣೆ ಇದರಲ್ಲಿ ಬಂದಿದೆ. ಜಾನಕಿಯು ಗರ್ಭವತಿಯಾದಾಗ ಹಿಂದಿನ ದಿನಗಳ ಸ್ಮರಣೆಯಿಂದ ಋಷಿಪತ್ನಿಯರೊಡನೆ ತಪೋವನದಲ್ಲಿರಬೇಕೆಂಬ ದಿವ್ಯ ಬಯಕೆ ಉಂಟಾಗುತ್ತದೆ. ಆ ಸಮಯದಲ್ಲಿ ಶೂರ್ಪನಖಿಯು ಕೊರವಂಜಿಯ ವೇಷ ಧರಿಸಿ ಬಂದು ಅವಳಿಂದ "ಅನ್ನವಸ್ತ್ರಗಳನೊಲ್ಲೆ ನಿನ್ನ ಭಾಗ್ಯವ ನಾನೊಲ್ಲೆ ಮುನ್ನಿನ ರೂಪ ಇನ್ನು ನೀ ಬರೆದರೆ" ಸಾಕೆಂದು ಅವಳಿಂದ ರಾವಣನ ಚಿತ್ರವನ್ನು ಬರೆಯಿಸುತ್ತಾಳೆ.

ಹತ್ತು ತಲೆಯವನ ಇಪ್ಪತ್ತು ಕರಗಳ ಬೆಟ್ಟದ ಕೆದರಿದಂಥ ಕಾಯದ ಚಿತ್ರವ ಬರೆದಾಗ ವರವ ಕೊಡೆಂದು ಹೇಳುತ್ತಾಳೆ ಶೂರ್ಪನಖಿ. ಅದು ಅಮರವಾಗಲಿ ಎಂದು ಹೇಳಿ ಕಿರಿಯ ಲಕ್ಷ್ಮಣ ದೇವ ಹೊಡೆದರೆ ಸಾಯೆಂದು ಹೇಳಿ ಬಿಡುತ್ತಾಳೆ. ಅಮರತ್ವ ಪಡೆದ ಪಟವು ಆಕಾಶದಲ್ಲಿ ಹಾರಾಡುತ್ತದೆ. ಹಿಡಿದು ಮಂಚದಲ್ಲಿ ಅಡಗಿಸಿಟ್ಟ ಚಿತ್ರ ರಾಮನ ಕೋಪಕ್ಕೆ ಅನುಮಾನಕ್ಕೆ ಆಸ್ಪದವಾಗುತ್ತದೆ.

ಹೆಂಗಸು ಹಡೆತಲಿ ಮೃತ್ಯುವೆಂಬರು ಜನರು
ಇಂದ ಕಂಡೆನು ಸಾದೃಶ್ಯ

ಎಂದು ಮರುಗುತ್ತಿದ್ದ ರಾಮನಿಗೆ ಸೀತೆಯು 'ಬಂದೊಬ್ಬ ತಾಟಕಿ ಮೋಸವ ಮಾಡಿ ಚಂದಾದ ಚಿತ್ರಪಟ ಬರೆಸಿದಳೆಂದು'ಹೇಳಿದರೂ ಪ್ರಾಣವಲ್ಲಭ ನೀನೇ ಗತಿಯೆಂದು ರಾವಣನ ಮರುಳಾಗೋ ದರಿಯೆನೆಂದು ಎಷ್ಟು ಹೇಳಿದರೂ ರಾಮು ಕೋಪ ಬಿಡಲಿಲ್ಲ. ನಡುವೆ ಬಂದ ಲಕ್ಷ್ಮಣ ಉಭಯತ್ರರಿಗೂ ಸಮಾಧಾನ ಹೇಳುತ್ತಾನೆ. 'ಕೆಂಡವಗೊರಲಿ ಮುಟ್ಟುವುದೇ ? ಏಳು ಲೋಕವ ಸಲಹುವ ಜಗನ್ಮಾತೆಗೆ ನಿಂದ್ಯೆಪಕೀರ್ತಿ ಎಂಬುದಿದೆಯೇ ?' ಎಂದು ಅಣ್ಣನಾದ ರಾಮನಿಗೆ 'ಸಿಟ್ಟಿನ ವೇಳೆ ಮೂಗ ಕೊಯ್ದರೆ ಶಾಂತ ವೇಳೆಗೆ ಹತ್ತುವುದೇ'? ಎಂದು ಸಾಂತ್ವನ ನುಡಿಯುತ್ತಾನೆ.

ಕೊನೆಗೆ ಸೀತೆ ಕಾಡಿಗೆ ತೆರಳಿ ಅಲ್ಲಿ ಲವಕುಶರಿಗೆ ಜನ್ಮ ಕೊಡುತ್ತಾಳೆ. ರಾಮನ ಯಾಗದ ಕುದರೆಯು ವಾಲ್ಮೀಕಿ ಆಶ್ರಮ ಹೊಕ್ಕಾಗ ಲವ ಕುಶರು ಆದನ್ನು ಕಟ್ಟಿಹಾಕುತ್ತಾರೆ. ಆಗ ಶತ್ರುಘ್ನ ಲವಕುಶರಿಗೆ ನಡೆಯುವ ಸಂಭಾಷಣೆ ಹೆಚ್ಚು ರಸವತ್ತಾಗಿ ಇಲ್ಲಿ ಮೂಡಿಬಂದಿದೆ. ತಂದೆ ಮಕ್ಕಳಿಗೆ ನಡೆದ ಯುದ್ಧವೂ ಸೂರ್ಯನ ವರದಿಂದ ಸುಖಾಂತವೇ ಆಗುತ್ತದೆ.

ಬರೆದೋದಿದವಳಲ್ಲ ಮರುಳೆ
ಕರುಣಾಕರ ದೇವ ಹೇಳವನ ಕಟ್ಟಿ ರಂಗಯ್ಯ
ಅರುಹಿದಂದದಷ್ಟು ಪೇಳಿದೆನು

ಎಂದು ಹೇಳುವಲ್ಲಿ ಲಿಪಿಕಾರ ಕುಮಾರವ್ಯಾಸನ ನೆನಪಾಗುತ್ತದೆ.

ಗಿರಿಯಮ್ಮನ ಮತ್ತೊಂದು ಕಿರಿಯ ಕೃತಿ ಸೀತಾಕಲ್ಯಾಣ. ಹೆಸರೇ ಸೂಚಿಸುವಂತೆ ಇದು ರಾಮು ಸೀತೆಯ ವಿವಾಹದ ಅನುಪಮ ಚಿತ್ರಣ. ವಿವಾಹದ ಕೆಲವಾರು ಶಾಸ್ತ್ರಗಳು ಹೆಚ್ಚು ವಿಸ್ತಾರವಾಗಿ ವಿವರಿಸಲ್ಪಟ್ಟಿವೆ. ಪೊಂಬಣ್ಣದ ಹಳದಿಯ ಕಲಸಿ ತುಂಬಿದ ಹರಿವಾಣದಲ್ಲಿ ಅಂಬುಜನಾಭನಿಗೆ ಅರಿಷಿಣೆಣ್ಣೆಯ ಮಾಡಲು ಸಂಭ್ರಮದಿಂದ ಐದೆಯರು ಕರೆತರುತ್ತಾರೆ. ಈ ಶಾಸ್ತ್ರಕ್ಕೆ ಬ್ರಹ್ಮನ ರಾಣಿ ಶಾರದೆ, ವಾಯು ರಮಣಿ ಅಂಜನದೇವಿ ಕೌಸಲ್ಯೆ ಕೈಕೆ ಸುಮಿತ್ರೆಯರೂ ಸೇರುತ್ತಾರೆ.

ತಟ್ಟೆಬಟ್ಟಲೊಳಿರ್ದ ಅರಿಸಿಣ। ಬೊಟ್ಟಲಿ
ತೆಗೆದು ಕೌಸಲ್ಯದೇವಿ
ಸೃಷ್ಟಿಗೊಡೆಯ ಶ್ರೀರಾಮಗೆ ಕೊಡೆಂದು
ಕೊಡುತ್ತಾಳೆ ಸಿರಿದೇವಿ ಕೈಗೆ
ಅಂಬುಜನಾಭ ಶ್ರೀರಾಘವಗೆ ।
ಕುಂಭಿನಿಸುತೆ ಶ್ರೀಜಾನಕಿಗೆ ॥
ನಂಬಿದ ಭಕ್ತರ ಸಲಹೆಂದು ಹರಸುತ ।
ತಾಂಬೂಲವನ್ನಿತ್ತರೈದೆಯರು ॥

ಈ ಮಂಗಳ ವಿವಾಹೋತ್ಸವದ ಉರುಟಣೆ ಪದಗಳನ್ನು ಸಂಗೀತದಿ ಹೇಳಿ ಕೇಳಿದ ಜನರಿಗೆ ಹೆಳವನಕಟ್ಟೆ ರಂಗಯ್ಯನೊಲಿಯುವನು ಎಂಬ ಫಲ ಶ್ರುತಿಯನ್ನೂ ಗಿರಿಯಮ್ಮ ಸೇರಿಸಿದ್ದಾಳೆ.

ಗಿರಿಯಮ್ಮನ ಮತ್ತೊಂದು ಕೃತಿ 'ಶಂಕರ ಗಂಡನ ಹಾಡು' ಒಂದು ಸಂಪ್ರದಾಯದ ಕಥೆಯಾಗಿ ಇಂದಿಗೂ ಉತ್ತರ ಕರ್ನಾಟಕದ ಮಹಿಳೆಯರು ಹೇಳಿಕೊಳ್ಳುವುದುಂಟು. ಶ್ರಾವಣ ಮಾಸದ ಅಷ್ಟಮಿಯ ದಿನ ಗೌರಿಪೂಜೆ ಮಾಡಿ ದಾರ ಕಟ್ಟಿಕೊಳ್ಳುವಾಗ ಈ ಕಥೆಯನ್ನು ಹೇಳುವರು.

ಶಿವನು ತನ್ನ ತಂಗಿಯಾದ ರತಿದೇವಿಗೆ ಕಾಮದೇವನೇ ಸರಿಯಾದ ವರನೆಂದು ನಿಶ್ಚಯಿಸಿ ಅವನನ್ನು ಕರೆಸುತ್ತಾನೆ. ತನ್ನ ತಂಗಿಯನ್ನು ಆಗಾಗ ತವರು ಮನೆಗೆ ಕಳುಹಿಸುತ್ತಿರಬೇಕೆಂಬ ಒಪ್ಪಂದ ಮಾಡಿಕೊಂಡು ಅವಳನ್ನು ಅವನಿಗೆ ವಿವಾಹ ಮಾಡಿಕೊಡುತ್ತಾನೆ.

ಸರ್ವ ಲಕ್ಷಣವುಳ್ಳ ಸರಸಿತನೇತ್ರೆ
ಒಬ್ಬಳೆ ರತಿ ನಮ್ಮ ತಂಗಿ
ಹಬ್ಬ ಹುಣ್ಣಿಮೆಯಾದರೆ ಕಳಿಸುವುದಾಗಲಿ
ನಿರ್ಬಂಧ ಪಡಿಸದಿರಿ—

ಎಂದು ಶಿವನು ಅವಳನ್ನು ಕಾಮನೊಂದಿಗೆ ಕಳುಹಿಸಿಕೊಡುವನು. ಆಗ ಮನಸಿಜನು ಅನುಮಾನವೇನದರಲ್ಲಿ ನಿಮ್ಮ ಮನೆಗೆ ನೆನೆಸಿದಾಗ ಬರಲು ಅವಳಿಗೆ ಸ್ವತಂತ್ರ ಉಂಟೆಂದು ಹೇಳಿ ಹೋಗುವನು. ಶಿವನು ತಂಗಿಯ ಸಂಸಾರಕ್ಕೆಂದು

ಸೆಳೆಮಂಚ ಸುಪ್ಪತ್ತಿಗಿ ಗಿಂಡಿಬಟ್ಟಲು
ತಳಗಿ ತಾಬಾಣ ತಂಗಿಗಿತ್ತ
ಸಾಸಿರ ಗೋವುಗಳ ಜವತುರಂಗವ
ಬ್ಯಾಸರಿಯದೆ ತಂಗಿಗಿತ್ತ
ಲೇಸಾದ ಊರು ಉಂಬಳಿಯ ಕೊಟ್ಟು ರತಿಯ
ವಿಳಾಸ ಪಟ್ಟಣಕೆ ಕಳಿಸಿದನು.

ಮನ್ಮಥರತಿಯರು ಸುಖಸಂಸಾರದಲ್ಲಿರುವಾಗ ಒಮ್ಮೆ ಶಿವನನ್ನು ಕುರಿತು ಗಂಡ ಅಪಹಾಸ್ಯ ಮಾಡಿದಾಗ ರತಿಯು 'ಒಡಹುಟ್ಟಿದಣ್ಣ ಮುನಿದರೆ ಕೆಡುವೋದು ನಮ್ಮ ಐಶ್ವರ್ಯ ಆತನ ಗೊಡವಿ ಮುನ್ನ ನಿಮಗ್ಯಾಕೆ' ಎಂದು ಎಚ್ಚರಿಸುತ್ತಾಳೆ. ರತಿಯನ್ನು ನೋಡಿ ಕರೆದೊಯ್ಯಲು ಬಂದ ಶಿವ

ನನ್ನು ಹಾಸ್ಯಮಾಡಿದುದು ಸಾಲದೆ ಅವನ ಬಡತನವನ್ನೂ ತನ್ನ ಐಶ್ವರ್ಯವನ್ನೂ ಎತ್ತಿ ಆಡುತ್ತಾನೆ.

ಹೂವಿನ ಹಾಸೋ ಮಂಚವು ಪಂಚಭಕ್ಷ್ಯವು
ಯಾವಾಗಲೂ ನಿಮ್ಮ ಮನಿಯ ।
ಭಾಮಿನಿ ಜೋಳದನ್ನವ ಉಣಲಾರಳು
ನಾನೇನು ಕಳುಹುವುದಿಲ್ಲ ॥–

ಎಂಬ ಗರ್ವದ ಮಾತನ್ನು ಕೇಳಿದ ಶಿವನು ಅವರ ಐಶ್ವರ್ಯವೆಲ್ಲಾ ಕಳೆದುಹೋಗುವಂತೆ ಮಾಡುತ್ತಾನೆ. ಮನ್ಮಥನನ್ನು ತನ್ನ ದನಗಳನ್ನು ಕಾಯಲು ನೇಮಿಸುತ್ತಾನೆ. ಕೊನೆಗೆ ರತಿಯ ಬೇಡಿಕೆಯಂತೆ ಶಿವನ ಕಾರುಣ್ಯದಿಂದ ಎಲ್ಲವೂ ಮರಳಿ ದೊರೆಯುತ್ತದೆ. ಅಹಂಭಾವ ತೋರಿದವರನ್ನು ಶಿವ ಶಿಕ್ಷಿಸಿ ನಂತರ ಕೃಪೆದೋರುವನೆಂಬ ನೀತಿಯನ್ನು ಗಿರಿಯಮ್ಮನು ತಿಳಿಸಿದಂತಿದೆ.

ಗಿರಿಯಮ್ಮನ ಮತ್ತೊಂದು ವಿಸ್ತಾರವಾದ ಕೃತಿ ಚಂದ್ರಹಾಸನ ಕಥೆ.

ಸುರಪುರವಾಸ ಲಕ್ಷ್ಮಿಯ ಕಾಂತ ಭಕ್ತರ್ಗೆ
ಬರೆದಂಥ ಜೈಮಿನಿಯೊಳಗೆ
ಪರಮ ಭಕ್ತ ಚಂದ್ರಹಾಸನ ಕಥೆಯನು
ಚರಿತೆಯ ಮಾಡಿ ವರ್ಣಿಸುವೆ–

ಎಂದು ಹೇಳುತ್ತ ಕಾವ್ಯ ಪೀಠಿಕೆಯಲ್ಲಿ ಕಾರುಣ್ಯನಿಧಿ ಹೆಳವನಕಟ್ಟೆ ರಂಗಯ್ಯನಿಗೆ ಶರಣೆಕ್ಕಿ ತಾಯಿ ಸರಸ್ವತಿಯನ್ನು ಪ್ರಾರ್ಥಿಸಿರುವಳು.

ಶೃಂಗಪುರದ ನೆಲೆವಾಸೆ ಸಜ್ಜನ ಪೋಷೆ
ಸಂಗೀತ ಲೋಲೆ ಸುಶೀಲೆ
ಮಂಗಳ ಗಾತ್ರೆ ಶಾರದೆ ಎನ್ನ ಜಿಹ್ವೆಯಲಿ
ಹಿಂಗದೆ ನೆಲೆಸೆನ್ನ ತಾಯಿ

ಪಾಂಡವರ ಅಶ್ವಮೇಧಯಾಗದ ಕುದುರೆಯನ್ನು ಚಂದ್ರಹಾಸನ ಮಗ ಮಕರಧ್ವಜನು ಕಟ್ಟಲು ಆಗ ನಾರದನು ಫಲುಗುಣನಿಗೆ ಈ ಕಥೆಯನ್ನು ಹೇಳುತ್ತಾನೆ.

ಕೇರಳ ದೇಶದ ರಾಜ್ಯವನಾಳುವ ಪ್ರಭು ಧಾರ್ಮಿಕನು. ಆತನ ಸತಿಗೆ ಮೂಲಾನಕ್ಷತ್ರದಲಿ ಪುತ್ರನು ಜನಿಸುವನು. ಜಾತಕರ್ಮ ನಾಮಕರಣ ಮಾಡದೆ ಅವನ ತಂದೆಯು ತೀರಿಹೋಗಲು ನಾಯಕರಿಲ್ಲದ ಕಾಯವಿದೇಕೆಂದು ರಾಜಪತ್ನಿಯೂ ಸಹಗಮನ ಮಾಡುತ್ತಾಳೆ. ಚಂದ್ರಹಾಸನು ದೇಸಿಗನಾಗಿ ಪೋಷಣೆ ಮಾಡುವವರಿಲ್ಲದಾಗ ದಾಸಿಯೊಬ್ಬಳು ಕಂಡು ಮನದಲ್ಲಿ ಮರುಗುತ ಆ ಶಿಶುವನು ಪಾಲಿಸುವಳು. ದೇಶಾಧಿಪತಿಯ ಗರ್ಭದಲಿ ಜನಿಸಿ ಬಂದು ನಿನಗೆ ಹಾಸುವ ವಸ್ತ್ರಗಳಿಲ್ಲ ಬೀಸಿ ತೂಗುವರೆ ತೊಟ್ಟಿಲುಯಿಲ್ಲ ಎಂದು ಬೇಸತ್ತು ಅಳಲುವ ಈ ದಾದಿಯೂ ಕೆಲ ಕಾಲಾಂತರದಲ್ಲಿ ತೀರಿಹೋಗುತ್ತಾಳೆ. ಬಾಲಕನೀಗ ಪರಪುಟ್ಟನಾದುದ ಕಂಡು ಕೇರಿಯ ಮಾತೆಯರೆಲ್ಲ ಇವನ ತಾಯಿಯರೇ ಆಗುತ್ತಾರೆ. ಇವನೊಮ್ಮೆ ಬಟ್ಟೆವಿಡಿದು ಬರುತಿರಲು ಪುಟ್ಟ ಸಾಲಿಗ್ರಾಮ ಶಿಲೆಯು ದೊರೆಯುವುದು. ಅದನ್ನು ರಕ್ಷಿಸಲು ಬೇರೆ ಮಾರ್ಗವಿಲ್ಲದೆ ಬಾಲನು ಬಾಯಲ್ಲಿಯೇ ಕಾಪಿಡುತ್ತಾನೆ. ದುಷ್ಟಬುದ್ಧಿಯ ದೃಷ್ಟಿಗೆ ಈ ಬಾಲಕನ ಅದೃಷ್ಟವೇನೆಂದು ಕಂಡು ಇವನನ್ನು ಕೊಲ್ಲಲು ಆಜ್ಞಾಪಿಸುತ್ತಾನೆ.

ಆದರೆ ಅದೃಷ್ಟವಶಾತ್ ಅವನು ಉಳಿದು ಕಾಡಿನಲ್ಲಿ ನೋವಿನಿಂದ ಅಲೆಯುವಾಗ ಅವನ ರಕ್ಷಣೆಗೆ ವನದೇವಿಯೇ ಬರುವಳು. ಅಲ್ಲಿ ಚಂದ್ರಹಾಸ ಪಡುವ ಯಾತನೆಯನ್ನು ಗಿರಿಯಮ್ಮ ತನ್ನ ಸ್ತ್ರೀ ಸಹಜವಾದ ಅನುಕಂಪದಿಂದ ವಿವರಿಸಿದ್ದಾಳೆ.

ಚಂದ್ರಹಾಸನು ತನಗೊದಗುವ ವಿಪತ್ತುಗಳನ್ನೆಲ್ಲಾ ದೈವದ ನೆರವಿನಿಂದ ಪರಿಹರಿಸಿಕೊಂಡು ಜಗನ್ಮಾನ್ಯ ನಾಗುತ್ತಾನೆ.

ಪದ್ಮಾಕ್ಷನು ಹಿರಿಯರಸಿ ಮಗ ಮಕ
ರಧ್ವಜ ಕಿರಿಯಾಕೆ ಮಗನು
ಅನ್ವಿತವಾಗಿ ರಾಜ್ಯವನಾಳುತ ಪ್ರ
ಸಿದ್ಧನಾಗಿಹ ಇಂದುಹಾಸ

ಕಥೆಯ ನಿರೂಪಣೆ ಸರಳವಾಗಿದ್ದು ಅಲ್ಲಲ್ಲಿ ಬರುವ ಹೋಲಿಕೆಗಳು ಸಂದರ್ಭಕ್ಕೆ ತಕ್ಕುದಾಗಿದ್ದು ಓದುಗರ ಮನಸೆಳೆಯುವಂತೆ ರಚಿಸಿದ್ದಾಳೆ ಗಿರಿಯಮ್ಮ.

ಈ ಕೃತಿಗಳೊಂದಿಗೆ ಹೆಳವನ ಕಟ್ಟೆ ರಂಗನನ್ನು ಅಂಕಿತವಾಗಿ ಮಾಡಿಕೊಂಡು ಅನೇಕ ಕೀರ್ತನೆಗಳನ್ನೂ ಗಿರಿಯಮ್ಮ ಬರೆದಿರುವಳು. ಇವಳ ಕೃತಿಗಳಲ್ಲಿ ಹರಿಹರ ಬ್ರಹ್ಮಾದಿಗಳ ಭೇದವಿಲ್ಲದೆ ಎಲ್ಲರನ್ನೂ ನುತಿಸಿರುವುದೇ ಕಾಣಬರುವ ಒಂದು ವೈಶಿಷ್ಟ್ಯವಾಗಿದೆ.

ಗಿರಿಯಮ್ಮ ತಾನು ಆರಾಧಿಸಿ ಸಾಕ್ಷಾತ್ಕರಿಸಿಕೊಂಡ ಕಾರುಣ್ಯನಿಧಿ ರಂಗನಾಥನ ರೂಪವನ್ನು ಚಿತ್ರಿಸುತ್ತ

ಮಂಡಲದೊಳುದ್ದಂಡ ಮೂರುತಿ ।
ಹಿಂಡು ಹಿಂಡು ದೈತ್ಯರ ತಂಡ ತಂಡದಿ
ತುಂಡು ಮಾಡಿದ ಸ್ವಾಮಿ
ಕಾಮಪಿತನಾ ಕೌಸ್ತುಭಹಾರನಾ
ಕಸ್ತೂರಿ ನಾಮವ ನೇಮದಿಂದ ಧರಿಸಿದಾತನ

ವಾಮಭಾಗ ಲಕ್ಷ್ಮಿಸಹಿತ ಹೇಮ ಮಂಟಪದೊಳಗೆ ಕುಳಿತವನನ್ನು ತಾನು ಕಂಡೆನೆಂದು ವಿವರಿಸುತ್ತಾಳೆ.

ಲಿಂಗದೇವ ಶಿವನನ್ನು 'ವೇದಕ್ಕೆ ಸಿಲುಕದಾತನೆಂದು, ಬೂದಿ ಮೈಯೊಳು ಧರಿಸಿದವನೆಂದೂ, ಗಿರಿಯನ್ನು ಹೊದ್ದವನೆಂದು ವ್ಯಾಧನಾಗಿ ಒಲಿದವನೆಂದು ಮದನನನ್ನು ಉರುಹಿದವನೆಂದು ಗಂಗೆಯ ಪೊತ್ತವನೆಂದೂ' - ವರ್ಣಿಸಿರುವಳು.

ಒಮ್ಮೆ ಮಳೆ ಬಾರದಾದಾಗ ಇವಳು ಶ್ರೀರಂಗನನ್ನು ಕುರಿತು ಪ್ರಾರ್ಥಿಸುತ್ತಾ ಮಳೆಯಿಲ್ಲದ ಬವಣೆಯನ್ನು -

ಪಶುಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದು
ತೃಷೆಯಡಗದೆ ತಲ್ಲಣಿಸಿ ಮೂರ್ಛೆಗೊಂಡು
ದೆಶೆ ದೆಶೆಗೆ ಬಾಯಿಬಿಡುತಿಹುವಯ್ಯ ಹರಿಯೆ–

ಎನ್ನುತ್ತ ಇಂದುಪುರಂದರಗೆ ಹೇಳಿ ವೃಷ್ಟಿಯ ತರಿಸೋ ಎಂದು ಬೇಡಿ ಮಳೆಯನ್ನು ತರಿಸುತ್ತಾಳೆ.

ರಂಗನಾಥನ ಮಂದಿರದಲ್ಲಿ ದೇವರ ಉಂಗುರವೊಂದು ಕಾಣೆಯಾದಾಗ ಅರ್ಚಕರು ತಮ್ಮ ಮೇಲೆ ಆಪಾದನೆ ಬರುವುದೆಂಬ ಅಂಜಿಕೆಯಿಂದ ಗಿರಿಯಮ್ಮನ ಬಳಿ ಬಂದು ತಿಳಿಸಲು ಅವಳು ಗುಬ್ಬಿಯ ಮುಖಾಂತರ ಉಂಗುರ ತರಿಸುತ್ತಾಳೆ.

ಹೊನ್ನುತಾ ಗುಬ್ಬಿ ಹೊನ್ನುತಾ ।
ಚಿನುಮಯ ಮೂರುತಿ ಚೆಲುವ ರಂಗನ ಕೈಗೆ।
ಬಲಿಯದಾನವ ಬೇಡಿಕೊಂಡಂಥ ಕೈಗೆ ।
ಛಲದಿಂದ ಛತ್ರೇರ ಆಳಿದಂಥ ಕೈಗೆ ।
ಗೆಲವಿಂದ ವಿಭೀಷಣಗಭಯವಿತ್ತಾ ಕೈಗೆ
ಬಲುಬೆಟ್ಟ ಬೆರಳಲಿ ಇಟ್ಟಂಥ ಕೈಗೆ ।

ಎಂದೆನ್ನುವಾಗಲೇ ಗುಬ್ಬಿಯು ಉಂಗುರವನ್ನು ತಂದು ಕೊಡುತ್ತದೆ. ಹೀಗೆ ಕಣ್ಣಿಲ್ಲದವನಿಗೆ ಕಣ್ಣು ಬರುವಂತೆ ಮಾಡುತ್ತಾಳೆ.

ಹದಿನೆಂಟನೆ ಶತಮಾನದ ಅಂದರೆ ಸುಮಾರು ಇನ್ನೂರು ವರ್ಷಗಳ ಹಿಂದೆ ಬಾಳಿ ಬದುಕಿದ ಗಿರಿಯಮ್ಮನು ಸೌಶೀಲ ಸೌಜನ್ಯಗಳ ಸಾಕಾರ ಮೂರ್ತಿಯೆಂಬುದು ಅವಳ ಕಾವ್ಯಗಳಿಂದ ತಿಳಿದು ಬರುವ ವಿಷಯ. ಲೌಕಿಕ ಬಂಧನಗಳಿಗೆ ಒಳಗಾಗದೆ ಶ್ರದ್ಧೆಯ ಮೆಟ್ಟಿಲುಗಳಿಂದ ಭಕ್ತಿಯ ಮಜಲುಗಳನ್ನು ಏರಿ ಮುಕ್ತಿಯ ಪಾರಮ್ಯವನ್ನು ತಲುಪಿದವಳು ಗಿರಿಯಮ್ಮ, ಅಕ್ಕಮಹಾದೇವಿಯಂತೆ. ಸಂಚಿಯ ಹೊನ್ನಮ್ಮ ತಾನು ಗೃಹಿಣಿಯಾಗಿ ಗೃಹಕೃತ್ಯದ ಗೃಹಧರ್ಮ ಗೃಹಸ್ಥೆಯ ಜವಾಬ್ದಾರಿಗಳನ್ನು ಕುರಿತು ಹೇಳಿದರೆ ಇವಳು ತಾನು ಸಾಕ್ಷಾತ್ಕರಿಸಿಕೊಂಡ ಬಾಲ ಮೋಹನನ

(24 ನೇ ಪುಟ ನೋಡಿ)

# ಕಿಶೋರ ಜಗತ್



## ದ್ರೌಪದಿಯ ಶಾಪ

**ಕುಮಾರಿ ಎಸ್. ಸುಮನಾ**

ಒಮ್ಮೆ ಭೀಮಸೇನನು ಹಸ್ತಿನಾವತಿಯಿಂದ ಶ್ರೀಕೃಷ್ಣ ಪರಮಾತ್ಮನನ್ನು ಕಾರ್ಯನಿಮಿತ್ತವಾಗಿ ಕಾಣಲು ದ್ವಾರಕೆಗೆ ಬರುವಂತಾಯಿತು. ಆತನು ದ್ವಾರಕೆಗೆ ಬಂದು ಅರಮನೆಯ ಬಾಗಿಲ ಬಳಿ ಬಂದನು. ಅದೇ ಸಮಯದಲ್ಲಿ ಶ್ರೀಕೃಷ್ಣಪರಮಾತ್ಮನು ತನ್ನ ಸಹಧರ್ಮಿಣಿ ರುಕ್ಮಿಣಿಯೊಡನೆ ಮಾತಿನಲ್ಲಿ ತೊಡಗಿ "ಪಾಂಡವರು......ಹಹ ಹಹಾ......" ಎಂದು ನಗುತ್ತಿದ್ದನು. ಇದನ್ನು ಸ್ವತಃ ಕಿವಿಯಾರೆ ಕೇಳಿಸಿಕೊಂಡ ಭೀಮಸೇನನಿಗೆ ಸುಮ್ಮನಿರಲು ಸಾಧ್ಯವಾದೀತೆ? ಆದರೂ ತಾಳ್ಮೆ ವಹಿಸಿ ಅರಮನೆಗೆ ಪ್ರವೇಶಸಬಾರದೆಂದು ಹಠತೊಟ್ಟು ಹೊರಗಡೆಯೆ ಕುಳಿತ ಅವನು "ತಮ್ಮದು ಎಂತಹ ಸ್ಥಿತಿಯಾಯಿತು. ನಮ್ಮ ದಾಯಾದಿಗಳಾದ ಕೌರವರು ನಮಗೆ ರಾಜ್ಯ ಕೊಡದೆ ಹೋದದ್ದು ಶ್ರೀ ಕೃಷ್ಣನಿಗೆ ತಿಳಿದೂ ತಮ್ಮನ್ನು ಅಪಹಾಸ್ಯ ಮಾಡಿಕೊಳ್ಳುವ, ಅದೂ ತನ್ನ ಮಡದಿಯೊಡನೆ ಆಡಿ ನಗುವಷ್ಟು ಹೀನಾಯವಾಗಿಬಿಟ್ಟಿತಲ್ಲ ಅಯ್ಯೋ . ..." ಎಂದು ತಮ್ಮ ಸ್ಥಿತಿಗೆ ತಾನೇ ಮಮ್ಮಲ ಮರುಗಿ ಸಿಟ್ಟಾಗಿ ಕುಳಿತನು.

ಅಷ್ಟರಲ್ಲಿ ಕೃಷ್ಣನಿಗೆ ದೂತರ ಮುಖಾಂತರವಾಗಿ ಭೀಮಸೇನನ ಆಗಮನದ ಸುದ್ದಿ ಜೊತೆಗೆ ಆತ ಬಾಗಿಲಲ್ಲಿ ಕಾದಿರುವ ಸಮಾಚಾರವೂ ತಿಳಿದು ಬಂದಿತು. ತನ್ನ ಮಡದಿಯೊಡನೆ ಭಾವನನ್ನು ಭೇಟಿ ಮಾಡಲೆಂದು ಬೇಗ ಬಂದ ಆ ಶ್ರೀಹರಿ "ಭಾವಾ ಭೀಮಸೇನ ......... ಏಕೆ ಹೀಗೆ ಕುಳಿತಿರುವೆ? ಎದ್ದು ಅರಮನೆಗೆ ಬಂದು ಪ್ರಯಾಣದ ಆಯಾಸ ಪರಿಹರಿಸಿಕೊಳ್ಳುವೆಯಂತೆ ಏಳು" ಎಂದು ಕೈಹಿಡಿದು ಎಬ್ಬಿಸಲು ಹೋದನು. ಆಗ ಅಡಗಿದ್ದ ಭೀಮಸೇನನ ಕೋಪ ಭುಗಿಲೆಂದಿತು, "ಸ್ವಾಮೀ.........ಪರಮಾತ್ಮ .........ನಮ್ಮ ಸಂಗತಿ ತಿಳಿದೂ ನಮ್ಮನ್ನು ಅಪಹಾಸ್ಯ ಮಾಡಿಕೊಂಡು ನಕ್ಕೆಯಲ್ಲ, ಇದು ನ್ಯಾಯವೇ? ಧರ್ಮವೆ? ಸಕಲವನ್ನು ಅರಿತ ನಿನಗೆ ಈರೀತಿ ಸಲ್ಲುವುದೇ? ಅದಕ್ಕೆ ಕಾರಣವನ್ನು ತಿಳಿಸಿದರೆ ಮಾತ್ರ ಅರಮನೆಯನ್ನು ಪ್ರವೇಶಿಸುವೆ. ಇಲ್ಲವಾದರೆ ಹಾಗೇ ಹಿಂತಿರುಗುವೆ" ಎಂದು ಕೋಪದ ಕಿಡಿಯನ್ನು ಮಾತಿನಲ್ಲಿ ಹಾರಿಸಿದನು. ಆದಕ್ಕೆ ಶ್ರೀಕೃಷ್ಣ ಪರಮಾತ್ಮನ ಉತ್ತರ ಮನೋಹರವಾದ ಮುಗುಳ್ನಗೆಯಿಂದ ಹೊರಬಂದಿತು "ಭೀಮಸೇನಾ. ಈ ಅಲ್ಪ ಕಾರಣಕ್ಕೆ ಸಣ್ಣ ಮಗುವಿನಂತೆ ಕೋಪಿಸಿಕೊಳ್ಳುವುದು ನಿನಗೆ ಸಲ್ಲುವುದೇ? ನಾನು ನಿಮ್ಮನ್ನು ಹಾಸ್ಯ ಮಾಡುವೆನೇ? ಇದು ನಿನಗೆ ತಿಳಿದಿಲ್ಲವೇ? ಹಠವನ್ನು ಬಿಟ್ಟು ಒಳಗೆ ಬಾ, ಬಿಸಿಲಲ್ಲಿ ಬಂದಿರುವ ನಿನಗೆ ಆಯಾಸ ಪರಿಹಾರವಾದ ಮೇಲೆ ವಿಚಾರ ತಿಳಿಸುವೆ ಬಾ" ಎಂದು ಕರೆದ. ಆದರೆ ಮನುಷ್ಯ ಜಾತಿಗೆ ಅಂಟಿ ಬಂದ ಸಂಶಯವು ಭೀಮಸೇನನಿಗೆ ಹೊರತೆ? ಆಗ ಭೀಮನು "ಸ್ವಾಮಿ ನೀನು ಏನೇ ತಿಳಿದರೂ ಸರಿ, ವಿಷಯ ನನಗೆ ತಿಳಿದ ಮೇಲೇ ನಾನು ಬರುವುದು. ಅಲ್ಲಿಯವರೆಗೆ ಕೆಟ್ಟು ಹೋಗಿರುವ ಮನಸ್ಸು ಹೊತ್ತು ಅರಮನೆಗೆ ಬರಲಾರೆ ಪ್ರಭು" ಎಂದು ಕಡ್ಡಿ ತಂಡು ಮಾಡಿದಂತೆ ನುಡಿದ. ಆಗಲೂ ಪರಮಾತ್ಮ ತನ್ನ ಮುಗುಳ್ನಗೆಯೊಂದಿಗೆ "ಭೀಮಸೇನಾ, ಆ ಕಾರಣ ಮತ್ತೇನಿಲ್ಲವಷ್ಟೆ? ನಾನು ನನ್ನ ಸೋದರತ್ತೆಗೆ ನೀಡಿರುವ ವಚನದ ಪ್ರಕಾರ ಪಾಂಡವರನ್ನು ಕಾಯ್ದುಕೊಳ್ಳುತ್ತಿರುವೆ, ಇಲ್ಲವಾಗಿದ್ದರೆ ಇಷ್ಟು ಹೊತ್ತಿಗೆ ಪಾಂಡವರು ಇರುತ್ತಿದ್ದರೋ ಇಲ್ಲವೋ ಹೇಳಲಾಗದು" ಎಂದು ಅಂದಾಗ ಭೀಮಸೇನನಿಗೆ ಅಪರಿಮಿತ ಆಶ್ಚರ್ಯವಾಯಿತು. "ಎಲಾ.........ಇದು ಹೇಗೆ ಸಾಧ್ಯ? ಆ......ಪಾಂಡವರ ತೋಳ್ಬಲ ಅಷ್ಟು ಕಡಿಮೆಯೇ? ನಮಗೆ ಯಾರಿಂದ ಅಪಾಯ ಬಂದರೂ ಲೆಕ್ಕಿಸದೆ ಅವರನ್ನು ಗೆಲ್ಲುತ್ತೇವೆ.ಅಂತಹ ಸೋದರರಾದ ನಮ್ಮ ಪ್ರಾಣಗಳಿಗೆ ಸಂಚಕಾರವು ಯಾರಿಂದ ಇರುತ್ತಿತ್ತೊ? ತಿಳಿಯಲಿಲ್ಲವಲ್ಲ.ಇದನ್ನು ಕೃಷ್ಣನ ಬಳಿಯೇ ಕೇಳಬಿಡುವ" ಎಂದು ಚಿಂತಿಸುತ್ತಾ ಪ್ರಕಾಶವಾಗಿ "ಇದೇನು ಕೃಷ್ಣ ಹೀಗೆ ಹೇಳುವೆ? ಇದೇನು ಈ ವಿಪರೀತ ಹಾಸ್ಯ? ನಮ್ಮ ಜೀವಕ್ಕೆ ಅಪಾಯ ತರುವಂಥವರೂ ಇರುವರೇ? ಹಾಗಾದರೆ ಅವರಾರು?" ಎಂದು ಪ್ರಶ್ನಿಸಿದ. ಆಗ ಶ್ರೀಕೃಷ್ಣನು"ಭೀಮ.........ನಿಮ್ಮ ಬಲಬುದ್ಧಿವಂತಿಕೆಗಳನ್ನು ನಾನು ಅಪಹಾಸ್ಯ ಮಾಡಿದೆನೆಂದು ತಿಳಿದೆಯಾ? ತಪ್ಪು ತಿಳಿದಿರುವೆ. ನಾನು ನಿಮ್ಮ ಬೆನ್ನಿಗೆ ಕಾವಲಾಗಿ ಇರದಿದ್ದರೆ ದ್ರೌಪದಿ ನಿಮ್ಮನ್ನು ಉಳಿಸುತ್ತಿದ್ದಳು ಎಂದು ತಿಳಿದಿರುವೆಯಾ?''.

ಇದೀಗ ಭೀಮಸೇನನಿಗೆ ಅಚ್ಚರಿಯೊಡನೆ ನಗೆಯೂ ಬಂದಿತು "ಏನು ಪರಮಾತ್ಮ? ಹಾಸ್ಯಗೈಯ್ಯಲು ಇದಕ್ಕಿಂತ ಬೇರೆ ವಿಷಯವಿರಲಿಲ್ಲವೇ? ನಿಜವಾಗಿಯೂ ನೀನು ಹೇಳುವುದು ದಿಟವೇ? ನಮ್ಮೆಲ್ಲರ ಸಹಧರ್ಮಿಣಿಯಾಗಿ ಅಬಲೆಯಾದ ದ್ರೌಪದಿ ನಮ್ಮನ್ನು ಉಳಿಯಗೊಡಳೇ?'' ಎಂದನು. "ನಿನಗೆ ನನ್ನ ನುಡಿಯ ಮೇಲೆ ಅಪನಂಬಿಕೆಯುಂಟಾದಲ್ಲಿ ನೀನು ರಾತ್ರಿಯಾಗುವುದಕ್ಕೆ ಮುನ್ನವೇ ಹಸ್ತಿನಾವತಿಗೆ ತೆರಳು. ಹೇಗಿದ್ದರೂ ದ್ರೌಪದಿ ಈಗ ನಿನ್ನ ವಶದಲ್ಲೇ ಇರುವಳಷ್ಟೇ? ಇಂದು ಅಮಾವಾಸ್ಯೆಯ ದಿನ. ಈ ದಿನದ ಇರುಳು ಕಳೆದ ಮೇಲೆ ನನ್ನ ಮಾತಿನಲ್ಲಿ ಸತ್ಯಾಂಶವಿರುವುದೋ ಇಲ್ಲವೋ ನಿನಗೆ ತಿಳಿಯುವುದು. ಅಲ್ಲಿ ನಡೆಯುವುದನ್ನು ಗಮನವಿಟ್ಟು ವೀಕ್ಷಿಸು'' ಎಂದು ಕೃಷ್ಣನು ನುಡಿದಾಗ ಭೀಮ ದಿಗ್ಭ್ರಾಂತನಾದನು "ಹಾಗಾದರೆ ನಾನು ಈಗಲೇ ಹಸ್ತಿನಾವತಿಗೆ ತೆರಳುತ್ತೇನೆ ಸ್ವಾಮಿ.... ಈಗ ನಿನ್ನ ರಾಜಭವನದಲ್ಲಿ ಪ್ರವೇಶಿಸಲು ನಾನು ಇಷ್ಟಪಡುವುದಿಲ್ಲ. ಸತ್ಯವನ್ನು ಪ್ರತ್ಯಕ್ಷವಾಗಿ, ಪ್ರಮಾಣಿಸಿ ನೋಡಿ ಮನಸ್ಸು ಹಗುರಮಾಡಿಕೊಂಡೇ ಬರುವೆ ಪ್ರಭು. ನಿನಗೆ ನನ್ನ ನಮನ, ಬರುತ್ತೇನೆ" ಎಂದು ದ್ವಾರಕೆಯಿಂದ ಹಸ್ತಿನಾವತಿಗೆ ಹಿಂತಿರುಗಿದನು. ಕೃಷ್ಣ ಪರಮಾತ್ಮ ಮುಗುಳ್ನಗೆ ಬೀರುತ್ತಾ ರುಕ್ಮಿಣಿಯೊಡನೆ ಅರಮನೆಯೊಳಗೆ ಹೋದನು.

ಭೀಮಸೇನನು ದಾರಿಯುದ್ದಕ್ಕೂ ಚಿಂತಿಸುತ್ತಲೇ ಬಂದನು. "ಇದೇನೀ ವಿಚಿತ್ರ? ಒಬ್ಬ ಹೆಂಗಸು ಅಸಮಾನ್ಯಶೂರರಾದ ನಮ್ಮಗಳನ್ನು ಉಳಿಸಲಾರದವಳೇ ಅಜೂ ಧರ್ಮಪತ್ನಿಯಾಗಿ. ಶ್ರೀಕೃಷ್ಣ ಪರಮಾತ್ಮನಿಗೆ ಎಲ್ಲವೂ ತಿಳಿದಿದೆ. ಆದರೂ ಇದು ನಂಬಿಕೆಯಾಗಲೊಲ್ಲದೇ'' ಎಂದುಕೊಳ್ಳುತ್ತಲೇ ಹಾದಿ ಸವೆಸಿದನು. ಈತನು ಹಸ್ತಿನಾವತಿಗೆ ಬರುವುದರಲ್ಲಿ ಗಾಢಾಂಧಕಾರವಾದ ಕತ್ತಲು. ಅದರೊಡನೆಯೇ ಅಭೇದ್ಯಮೌನ. ಆತನಿಗೆ ಎಲ್ಲವೂ ನಿರ್ಜನವಾಗಿ ಕಂಡಿತು. ಅಕ್ಷಣದಲ್ಲಿ ಅತ್ಯಂತ ಬಲಶಾಲಿಯೂ ಧೈರ್ಯವಂತಿಯೂ ಆದ ಭೀಮಸೇನನ ಹೃದಯವೂ ಮುಂದೇನಾಗುವುದೋ ಎಂದು ಕಾತರ ಅನುಮಾನ ಉದ್ವೇಗಗಳಿಂದ ಗಡಗಡನೆ ನಡುಗಿದಂತಾಯಿತು. ಆತನೆರವಾಗಿತನ್ನ ಕೋಣೆಗೆ ಪ್ರವೇಶಿಸಿದ. ಹಂಸತೂಲಿಕಾತಲ್ಪದಲ್ಲಿ ಭೀಮನ ಬರುವಿಕೆಗಾಗಿಯೇಕಾದು ಕುಳಿತು ಕಡೆಗೆ ಆಯಾಸ ಭರಿತಳಾದ ದ್ರೌಪದಿಯು ಮಲಗಿದ್ದಳು. ಅವಳ ಸುಕುಮಾರ ಮುದ್ದುಮೊಗ ಭೀಮಸೇನನಿಗೆ ರಾಕ್ಷಸಿಯ ಮುಖದಂತೆ ತೋರಿತು. ಸುಂದರ ಕಾಂತಿಯುತ ಶರೀರ ಕಪ್ಪಾದ ದೈತ್ಯಾಕಾರವಾಗಿದ್ದಂತೆ ಕಂಡುಬಂದಿತು. ಸದ್ದು ಮಾಡದೆ ಮೆಲ್ಲನೆ ಒಂದು ಕಡೆಯಲ್ಲಿ ಅಡಗಿ ಕಣ್ಣುರೆಪ್ಪೆ ಮುಚ್ಚದೆ ಮುಂದೇನಾಗುವುದೋ ಎಂದು ಚಿಂತಿಸುತ್ತಾ ಕುಳಿತನು.

ಸುಮಾರು ಮಧ್ಯರಾತ್ರಿಯ ವೇಳೆ ಭೀಮಸೇನನ ಎದೆ ಝಲ್ ಎನ್ನುವಂತೆ ದ್ರೌಪದಿ ಧಡಕ್ಕನೆ ಎಂದು ಕುಳಿತಳು. ಅವಳ ಮೊಗದಲ್ಲಿ ಆಗ ಒಂದು ರೀತಿಯ ಎದುರಿಸಲಾಗದ ಪಾಶವೀ ಕಳೆ ಎದ್ದು ತೋರಿತು. ಕಣ್ಣುಗಳು ಚಕ್ರ ಹೊಡೆವಂತೆ ಕೋಣೆಯ ಸುತ್ತಲೂ ತಿರುಗಿದವು. ಭೀಮನಿಗೆ ನಡುಕ ಹುಟ್ಟಿತು. ಎಲ್ಲಿ ತಾನು ಅವಳ ಕಣ್ಣಿಗೆ ಬೀಳುವೆನೊ ಎಂಬ ಭಯ ಆವರಿಸಿ ಬೆವರು ಇಳಿಯಲಾರಂಭಿಸಿತು. ಅದೃಷ್ಟವಶಾತ್ ಅವಳ ಕಣ್ಣು ಬಾಗಿಲೆಡೆಗೆ ತಿರುಗಿ ನಿಧಾನವಾಗಿ ಹೆಜ್ಜೆ ಇಡುತ್ತಾ ಹೊರಹೋದಳು. ಭೀಮನಿಗೆ ಚೀರಿಬಿಡುವಂತಾಯಿತು. ಆದರೂ ಕುತೂಹಲ ತಡೆಯದೆ ಮುಂದಿನ ಘಟನೆಯನ್ನು ನೋಡಲು ಎಚ್ಚರಿಂದ ಕಳ್ಳಹೆಜ್ಜೆಯನ್ನಿಡುತ್ತಾ ಅವಳನ್ನು ರಹಸ್ಯವಾಗಿ ಹಿಂಬಾಲಿಸಿದನು. ಸುಮಾರುದೂರ ಹಿಂತಿರುಗದೇ ನಡೆದು ಕಾಡುದಾರಿಯಲ್ಲೇ ಗಿಡಗೆಂಟೆ ಕಲ್ಲುಮುಳ್ಳುಗಳನ್ನು ದಾಟಿ ಹೋದಳು. ಬಲಶಾಲಿ ಭೀಮಸೇನನ ಅಪರಿಮಿತ ಬಲ ಉಡುಗಿ ಹೋಯಿತು. ಗಾಬರಿ ಮೊಗದಲ್ಲಿ ತಾಂಡವವಾಡಿತು. ಮುಂದೆ ಸ್ವಲ್ಪದೂರ ಹೋದ ಮೇಲೆ ಅಲ್ಲೊಂದು ದೊಡ್ಡದಾದ ಶಮೀ ವೃಕ್ಷವಿದ್ದಿತು. ಅದರ ಕೆಳಗೆ ದ್ರೌಪದಿ ನಿಂತು ತನ್ನ ತಲೆಯ ಬಿರುಗೂದಲಿಗೆ ಕೈ ಹಾಕಿ ಎಳೆದಾಗ ದ್ರೌಪದಿಯ ಪೂರ್ಣ ಶರೀರ ಕಳಚಿಹೋಗಿ ಕಾಳೀ ಸ್ವರೂಪ ಹೊಂದಿ ಭಯಂಕರಳಾದಳು. ಆ ಶರೀರವನ್ನು ವೃಕ್ಷದ ಒಂದು ಕೊಂಬೆಗೆ ನೇತು ಹಾಕಿ ಸುತ್ತಲೂ ತಿರುಗಿ ನೋಡಿದಾಗ ದೇವಾಧಿದೇವತೆಗಳು, ಯಕ್ಷ ರಾಕ್ಷಸರು, ಕಿನ್ನರ ಕಿಂಪುರುಷರು, ವಿಶಿಷ್ಟವೂ ಆಕೆಯ ಸುತ್ತಲೂ ತಲೆಬಾಗಿಸಿ ನಿಂತವು. ದೊಡ್ಡದಾದ ಸಿಂಹಾಸನದ ಮೇಲೆ ಕಾಳಿಕಾದೇವಿ ಮಂಡಿಸಿದಳು. ಬಿರುಗೂದಲು, ಚಾಚಿದ್ದ ನಾಲಗೆ, ಕೋರೆಹಲ್ಲುಗಳು, ತಲೆಬುರುಡೆಗಳಹಾರ, ಎಲುಬುಗಳಿಂದ ರಚಿತವಾದ ತ್ರಿಶೂಲ, ದಟ್ಟಕೆಂಪು ವರ್ಣದ ಸೀರೆ, ಮೊಗದಲ್ಲಿ ಭೀಕರವಾದ, ಎದೆನಡುಗಿಸುವ ಕಳೆ. ಮತ್ತು ಕೆಂಪಾದ ಕಣ್ಣುಗಳು ದೇವಿ ಶಾಂತವಾಗಿಲ್ಲವೆಂದುತಿಳಿಸಿದವು. ಸಮಸ್ತ ಜೀವಿಗಳು ದೇವಿಗೆ ಜಯಕಾರ ಮಾಡಿದವು. ಅವೆಲ್ಲವನ್ನೂ ಮೌನದಿಂದಲೇ ಸ್ವೀಕರಿಸಿದಳು. ತಾಯಿ ಕಣ್ಣಿನ ಚಲನೆಯಿಂದಲೇ ಕುಳಿತುಕೊಳ್ಳುವಂತೆ ಅಪ್ಪಣೆ ನೀಡಿದಳು. ಎಲ್ಲರೂ ಮಂಡಿಸಿದರು. ಸ್ವಲ್ಪ ಸಮಯ ಭೀಕರ ಮೌನ.

ಸುಕೋಮಲೆಯಾದ, ಸುರಸುಂದರ ಶರೀರೆಯೂ ಆದ ದ್ರೌಪದಿ ಎಲ್ಲಿ? ಈ ಭೀಕರ ಕಾಳಿಕಾದೇವಿಯೆಲ್ಲಿ? ಇದೇನೀ ಮಾಯೆ? ಪರಮಾತ್ಮಾ ಏನೀ ವೈಚಿತ್ರ್ಯ.........ಇವಳು ನಮ್ಮ....... ನನ್ನ ಸಹಧರ್ಮಿಣಿಯೆ......ಅಬ್ಬಾ......ಇಲ್ಲಿಂದ ಪಾರಾಗುವುದು ಹೇಗೆ'' ಎಂದು ಇವೆಲ್ಲವನ್ನೂ ವೀಕ್ಷಿಸುತ್ತಿದ್ದ ಭೀಮ ಗಡಗಡನೆ ನಡುಗಿದನು. ಹೀಗೆ ಬೆವರು ಸುರಿಸಿಕೊಳ್ಳುತ್ತಿರುವಾಗಲೇ ಸಿಡಿಲಿನಂಥಾ ಧ್ವನಿ ಮಾರ್ದನಿಗೈಯಿತು ದೃಷ್ಟಿ ಹೊರಳಿಸಿದಾಗ. ಸಿಂಹಾಸನದಿಂದ ಥಿಗ್ಗನೆ ಎದ್ದು ನಿಂತ ದೇವಿ "ಇದೇನು ಹೀಗೆ......ಅಪರಿಮಿತ ಹಸಿವು...... ಹಸಿವಾಗಿದೆ......ಎಲ್ಲಿ ಬಾಯಾರಿಕೆಯಿಂದ ಬೇಯುತ್ತಿರುವ ನನ್ನ ದಣಿವನ್ನು ತಣಿಸಲು ಬಿಸಿ ರಕ್ತವೆಲ್ಲಿ? ಈಗ ಕೊಂದ ಪ್ರಾಣಿಯ ಮಾಂಸವೆಲ್ಲಿ? ಎಲ್ಲರೂ ಹೀಗೇಕೆ ನಿಂತಿರುವಿರಿ...... ಈಗಲೇ ತಂದು ಒಪ್ಪಿಸಿ......ಹೋಗಿ!'' ಎಂದು ಕೋಪದಿಂದ ಆರ್ಭಟಿಸಿದಳು. ಅಬ್ಬಾ......... ಇದೇನೀಪರಿಯ ಗಡುಸುತನ, ಆರ್ಭಟ. ಅದೇ ಸಮಯದಲ್ಲಿ ಮುಂದೆ ಬಂದ ರಾಕ್ಷಸರಿಬ್ಬರು ಆಕೆಗೆ ನಮಿಸಿ "ತಾಯೇ......ದಯವಿಟ್ಟು ಶಾಂತಳಾಗು. ಇಂದು ನಿನ್ನ ಹಸಿವನ್ನು ತಣಿಸಲು ಆಯಾಸ ಪರಿಹರಿಸಲು ಒಂದು ರಕ್ತಮಾಂಸಗಳಿಂದ ತುಂಬಿದ ಸುಪುಷ್ಟ ಶರೀರದ ಜೀವಿ ಸಿಗಲಿಲ್ಲ, ಕೋಪೋದ್ರಿಕ್ತಳಾಗ ಬೇಡ, ತಾಯೇ, ದಯವಿಟ್ಟು ಕ್ಷಮಿಸು.......ಶಾಂತಳಾಗು ಮಾತೆ'' ಎಂದಾಗ ಕೆಂಡದುಂಡೆಗಳಂತೆ ಪ್ರಜ್ವಲಿಸುತ್ತಿದ್ದ ಕಣ್ಣುಗಳನ್ನು ಭಯಂಕರವಾಗಿ ತಿರುಗಿಸಿ ಕಿಡಿಕಾರುತ್ತಾ "ಇಷ್ಟು ಹೊತ್ತು ನನಗೆ ಜಯಕಾರ ಮಾಡಿದುದು ಈ ಸುದ್ದಿ ನೀಡಲೆಂದೇ ಏನು?......ಈ ನಿಮ್ಮ ಆಟ......ಹಹಹ'' ಎಂದು ಗಹಗಹಿಸಿದಳು ದೇವಿ. "ನನ್ನೀ ಹಸಿವನ್ನು ತಾಳಲಾರೆ, ನಾನದಕ್ಕೆ ಮಾರ್ಗೋಪಾಯ ಸೂಚಿಸುವೆ. ಇಲ್ಲಿಂದ ನೇರವಾಗಿ ಹಸ್ತಿನಾವತಿಯ ಅರಮನೆಗೆ ತೆರಳಿ. ಅಲ್ಲಿ ಪಾಂಡವರೈವರು ಇರುವರು. ಅವರನ್ನು ಕರೆದು ತನ್ನಿ......ಹೂಂ......ಹೊರಡಿ. ಇಲ್ಲವಾದರೆ ನನ್ನ ಕೋಪಾಗ್ನಿಗೆ ತುತ್ತಾಗುವಿರಿ. ತ್ವರೆ ಮಾಡಿ ಹೊರಡಿ. ಇಂದಿನ ಹರ್ಷಮಯ ಕಾಳರಾತ್ರಿಗೆ ನನ್ನ ಹಸಿವು ತೀರಿಸಲು ಅವರ ಸುಕುಮಾರ ಸುಪುಷ್ಟ ಶರೀರಗಳೇ ಆಗಲಿ, ಬೇಗ ಹೊರಡಿ'' ಎಂದು ಗಹಗಹಸಹಿಸುತ್ತಾ ಅಪ್ಪಣೆ ನೀಡಿದಳು.

ಪೊದೆಯಲ್ಲಿ ಕುಳಿತಿದ್ದ ಭೀಮನಿಗೆ ಪಾಂಡವರು ಎಂಬ ಶಬ್ದ ಕೇಳುತ್ತಲೂ ಸಿಡಿಲು ಬಡಿದಷ್ಟು ದಿಗಿಲುಂಟಾಯಿತು. ಅಣ್ಣತಮ್ಮಂದಿರನ್ನು ರಕ್ಷಿಸಲೋಸುಗವಾಗಿ ಧಗ್ಗನೆ ಎದ್ದು ಗಡಬಡಿಸಿ ಧಡದಢನೆ ಓಡಿ ಹೋಗಲು ಮೊದಲು ಮಾಡಿದನು. ಈ ಶಬ್ದಕ್ಕೆ ದೇವಿ ಸುತ್ತಲೂ ನೋಡಿದಳು. ಭೀಮಸೇನನ ಓಟ ಆಕೆಯ ಕಣ್ಣಿಗೆ ಬಿತ್ತು. ತಕ್ಷಣ ಆಕೆ ದ್ರೌಪದಿಯ ಶರೀರಕ್ಕೆ ಕೈಹಾಕಿ ಅದನ್ನು ಧರಿಸಿದಾಕ್ಷಣವೇ ಎಲ್ಲವೂ ಮಾಯವಾಯಿತು.

ದೇವಿ ದ್ರೌಪದಿ ತಾನೂ ಓಡು ನಡಿಗೆಯಲ್ಲಿ ಹಸ್ತಿನಾವತಿಗೆ ಹೆಜ್ಜೆ ಹಾಕಿದಳು.

ಪ್ರಾಣಭಯದಿಂದ ಗಾಬರಿಗೊಂಡ ಭೀಮಸೇನ ಓಡಿಬಂದು ಮತ್ತೆ ಅರಮನೆ ಹೊಕ್ಕು ಹಂಸತೂಲಿಕಾ ತಲ್ಪದಡಿ ಸೇರಿದ. ಮೈಯನ್ನು ಮುದುರಿಸಿ ಕುಳಿತ. ವೇಗವಾಗಿ ಓಡಿಬಂದ ರಭಸಕ್ಕೆ ಸುಸ್ತಾಗಿ, ಆಯಾಸಗೊಂಡು ಎಲ್ಲಕ್ಕಿಂತ ಹೆಚ್ಚಾಗಿ ಜೀವ ಉಳಿಸಿಕೊಳ್ಳಲು ಹೆಣಗುತ್ತಿರುವನಂತೆ ಮೇಲುಸಿರು ಹಾಕುತ್ತಿದ್ದ. ಅಷ್ಟರಲ್ಲೇ ಅರಮನೆ ಪ್ರವೇಶಿಸಿದಳು ದ್ರೌಪದಿ. ಬಲಶಾಲಿ ಭೀಮನ ಹೃದಯ ಡವಡವಿಸುತ್ತಿತ್ತು.

ಕೋಣೆಯ ಸುತ್ತಲೂ ಕಣ್ಣಾಡಿಸಿ ಕಡೆಗೆ ತನ್ನ ತಲ್ಪದಡಿಯಲ್ಲಿ ಅಡಗಿರುವ ಪತಿಯನ್ನು ಕಂಡುಕೊಂಡು ಬಿಟ್ಟಳು. ಅದರ ಬಳಿಗೆ ಬಂದು ತನ್ನ ಕೈಕೊಟ್ಟು 'ಏಳಿ ಸ್ವಾಮಿ, ಏಕೆ ಹೀಗೆ ಅಡಗಿ ಕುಳಿತಿರುವಿ?......ಏನಾಯಿತು ಪ್ರಭು......ಮಾತನಾಡದೆ ಸುಮ್ಮನೆ ಕುಳಿತಿರುವಿರೇಕೆ? ಏಕೆ ಏಳಿ'' ಎಂದು ಎಬ್ಬಿಸಲು ಪ್ರಯತ್ನಿಸಿದಳು. ಭೀಮಸೇನನ ನಡುಗುವಿಕೆ ನೂರ್ಮಡಿಯಾಯಿತು "ಶಿವ ಶಿವಾ... ನನ್ನ ಗತಿ ಏನಾದೀತು...ಈ ರೀತಿ ನಿನ್ನ ಭಕ್ತನ ಮೇಲೆ ಪರೀಕ್ಷೆ ಇಡುವುದೇ?...ಬೇಡಾ...ಬೇಡಾ ನನ್ನನ್ನು ಬಿಟ್ಟುಬಿಡು' ಎಂದು ತೊದಲುತ್ತ ನುಡಿದ.

ಆಗ ದ್ರೌಪದಿ ನಗುತ್ತ "ಇದೇಕೆ ಸ್ವಾಮಿ... ಇಂದು ಈ ರೀತಿ ವರ್ತಿಸುವಿರಿ? ನಿಮ್ಮ ಬಲಶಕ್ತಿ, ಸಾಮರ್ಥ್ಯ ಕೌಶಲಗಳು ಎಲ್ಲಿ ಹೋದವು? ಏಕೆ ಹೀಗೆ ನಡುಗುವಿರಿ? ಭಯವನ್ನು ಬಿಡಿ, ಏಳಿ''

(24ನೇ ಪುಟ ನೋಡಿ)

# ದಕ್ಷ ಪ್ರಜಾಪತಿ

ಹಿಂದಕ್ಕೆ ದೇವಲೋಕದಲ್ಲಿ ದಕ್ಷ ಪ್ರಜಾಪತಿಯೆಂಬ ದೇವದೊರೆ ಇದ್ದನು. ಅವನು ಬಹಳ ಪರಾಕ್ರಮಿಯೂ, ಶೂರನೂ, ಧೀರನೂ ಆಗಿದ್ದನು. ಇದಲ್ಲದೆ ಅವನು ತನ್ನ ಎಲ್ಲ ಪರಾಕ್ರಮ ಮತ್ತು ಸದ್ಗುಣಗಳಿಗಾಗಿ ದೇವತೆಗಳಿಂದಲೂ, ದಾನವರಿಂದಲೂ ಗೌರವಿಸಲ್ಪಡುತ್ತಿದ್ದನು.

ಹೀಗಿರಲಾಗಿ ಅವನಿಗೆ 'ಸತಿ' ಮತ್ತು ಇನ್ನಿಬ್ಬರು ಕನ್ನಿಕೆಯರು ಜನಿಸಿದರು. ಇವರೆಲ್ಲ ಹುಣ್ಣಿಮೆಯ ಚಂದ್ರನಂತೆ ಬೆಳೆಯುತ್ತಾ, ತಮ್ಮ ತಂದೆಯನ್ನು ಸಂತೋಷಗೊಳಿಸುತ್ತಿದ್ದರು. ದಿನಗಳು ಉರುಳಿದಂತೆ ದಕ್ಷನ ಹಿರಿಯ ಮಗಳಾದ ಸತಿಯು ಪ್ರಾಪ್ತ ವಯಸ್ಕಳಾದಳು. ಆಗ ದಕ್ಷ ಪ್ರಜಾಪತಿಯು ಅವಳ ಮದುವೆಯ ಯೋಚನೆಯನ್ನು ಮಾಡತೊಡಗಿದನು. ಆದರೆ ಸತಿಯ ಇಚ್ಛೆಯೇ ಬೇರೆಯಾಗಿತ್ತು. ಅವಳಿಗೆ ಕೈಲಾಸ ಪತಿಯಾದ ಈಶ್ವರನಲ್ಲಿ ಪ್ರೇಮವಿತ್ತು. ಆದರೆ ದಕ್ಷನಿಗೆ ಶಿವನಲ್ಲಿ ಪ್ರೇಮವಾಗಲೀ, ಭಕ್ತಿಯಾಗಲಿ ಇರಲಿಲ್ಲ. ಮತ್ತು ಅವನು ಶಿವನನ್ನು ಶ್ಮಶಾನವಾಸಿಯೆಂದೂ, ರುದ್ರಾಕ್ಷಿಯನ್ನು ಧಾರಣಮಾಡಿದವನೆಂದೂ, ಮತ್ತು ಉರಗಭೂಷಣನೆಂದು ಉಪೇಕ್ಷಿಸುತ್ತಿದ್ದನು. ಆದ್ದರಿಂದ ಅವನು 'ಸತಿ'ಯನ್ನು ಬೇರೆಯವರಿಗೆ ಮದುವೆ ಮಾಡಿಕೊಡಲೂ ಬಯಸುತ್ತಿದ್ದನು. ಕೊನೆಗೆ ಸತಿಯ ಹಠ ಸ್ವಭಾವದಿಂದ ಶಿವನನ್ನೇ ತನ್ನ ಅಳಿಯನನ್ನಾಗಿ ಮಾಡಿಕೊಂಡನು.

ಒಂದು ದಿನ ಸಪ್ತರ್ಷಿಗಳು ಯಾಗವನ್ನು ನಡೆಸುತ್ತಿದ್ದರು; ಅವರು ರೂಢಿಯಂತೆ ಎಲ್ಲ ದೇವತೆಗಳನ್ನೂ ಯಾಗಕ್ಕೆ ಆಹ್ವಾನಿಸಿದ್ದರು. ಹೀಗೆ ಯಾಗಕ್ಕೆ ಆಗಮಿಸಿದವರಲ್ಲಿ ವಿಷ್ಣು, ಶಿವ, ನಂದಿ, ಇಂದ್ರ ಮುಂತಾದ ಪ್ರಮುಖರು ಮೊದಲೇ ಬಂದು ತಮ್ಮ ಸ್ಥಾನಗಳಲ್ಲಿ ಆಸೀನರಾಗಿದ್ದರು. ಹೀಗೆ ಸ್ವಲ್ಪ ಸಮಯವು ಕಳೆದ ಮೇಲೆ ದಕ್ಷ ಪ್ರಜಾಪತಿಯೂ ತನ್ನ ಸಕಲ ಪರಿವಾರದವರೊಡನೆ ಆ ಸ್ಥಳಕ್ಕೆ ಆಗಮಿಸಿದನು. ಆಗ ಎಲ್ಲರೂ ರೂಢಿಯಂತೆ ಅವನಿಗೆ ಸ್ವಾಗತವನ್ನು ಹೇಳಿ ಸತ್ಕರಿಸಿದರು. ಆದರೆ ಅವನ ಅಳಿಯನಾದ ಶಿವನು ಅವನನ್ನು ಮನ್ನಿಸಲಿಲ್ಲ. ಇದರಿಂದ ಕುಪಿತನಾದ ದಕ್ಷನು ಶಿವನ ಮೇಲೆ ಸೇಡು ತೀರಿಸಿಕೊಳ್ಳಲು ಒಂದು ಯೋಜನೆಯನ್ನು ಮಾಡಿದನು, ಮತ್ತು ಆ ಯೋಜನೆಯನ್ನು ಕೂಡಲೇ ಕಾರ್ಯರೂಪಗೊಳಿಸಿದನು.

ಈ ಯೋಜನೆಯ ಪ್ರಕಾರ ಅವನು ಒಂದು ದೊಡ್ಡ ಯಜ್ಞವನ್ನು ಹೂಡಿದನು. ಅದು ಈಗಲೂ ಪುರಾಣಗಳಲ್ಲಿ 'ದಕ್ಷ ಯಜ್ಞ' ವೆಂದು ಪ್ರಸಿದ್ಧವಾಗಿದೆ. ಅವನು ಆ ಯಜ್ಞಕ್ಕೆ ಸಪ್ತ ಲೋಕಗಳಿಂದೊಡಗೂಡಿ ಸಕಲ ದೇವತೆಗಳನ್ನೂ ಆಹ್ವಾನಿಸಿದನು ಆದರೆ ತನ್ನ ಅಳಿಯ ಮತ್ತು ಮಗಳನ್ನು ಕರೆಯಲಿಲ್ಲ. ಹೀಗಿರಲಾಗಿ ಈ ಯಜ್ಞದ ವಾರ್ತೆಯು ಸತಿಯ ಕಿವಿಗೂ ತಲುಪಿತು. ಆಗ ಅವಳು ತನ್ನ ಪ್ರಾಣನಾಥನಾದ ಶಿವನಿಗೆ ತನ್ನ ತಂದೆಯ ಮನೆಗೆಹೋಗೋಣವೆಂದು ಆಗ್ರಹಪಡಿಸಿದಳು. ಆದರೆ ಶಿವನೂ ಅದಕ್ಕೊಪ್ಪಲಿಲ್ಲ ಕೊನೆಗೆ ಸತಿಯ ತನಗಾದರೂ ಹೋಗಲು ಅಪ್ಪಣೆಯನ್ನು ಕೊಡಬೇಕೆಂದು ಕೇಳಿದಳು. ಆದಕ್ಕೆ ಶಿವನೂ ಸಮ್ಮತಿಸಿದನು.

ಆಗ ಸತಿಯುತನ್ನ ಎಲ್ಲಾಪರಿವಾರದವರೊಡನೆ ತನ್ನ ತಂದೆಯ ಮನೆಗೆ ಹೊರಟಳು, ಆದರೆ ಅವಳಿಗೆ ಅಲ್ಲಿ ಒಂದು ಅನಿಶ್ಚತತೆಯೂ ಕಾದಿತ್ತು. ಅವಳ ತಂದೆಯಾದ ದಕ್ಷನು ಅವಳನ್ನು ಆದರಿಸಲಿಲ್ಲ ಮತ್ತು ಅವಳ ಹತ್ತಿರ ಕಣ್ಣೆತ್ತಿಯೂ ಕೂಡಾ ನೋಡಲಿಲ್ಲ. ಆಗ ಸತಿಗೆ ತನ್ನ ಒಡಹುಟ್ಟಿದ ತಂಗಿಯರೂ ಯಜ್ಞ ಮಂಟಪದಲ್ಲಿ ಓಡಾಡುತ್ತಿರುವುದನ್ನು ಕಂಡು ದುಃಖ ಒತ್ತರಿಸಿ ಬಂತು. ಆಗ ಅವಳು ಆ ದುಃಖವನ್ನು, ಅವಮಾನವನ್ನು ತಡೆಯಲಾರದೆ ಅದೇ ಯಜ್ಞಕುಂಡದಲ್ಲಿ ಹಾರಿ ಪ್ರಾಣಾರ್ಪಣೆಯನ್ನು ಮಾಡಿಕೊಂಡಳು. ಆಗ ಎಲ್ಲೆಡೆಗೂ ಹಾಹಾಕಾರ ಪ್ರಾರಂಭವಾಯಿತು. ಗಣ ಪರಿವಾರದವರೂ ತಮ್ಮ ಒಡತಿಗಾದ ಅವಮಾನವನ್ನು ಸಹಿಸಲಾರದೆ ಅಲ್ಲಿದ್ದವರ ಮೇಲೆ ಯುದ್ಧವನ್ನು ಪ್ರಾರಂಭಿಸಿದರು.

ಇದನ್ನು ಕಂಡು ಸಕಲ ದೇವತೆಗಳೂ ಭಯಭೀತರಾಗಿ ತಮ್ಮ ಸ್ಥಳಗಳಿಗೆ ಹಿಂದಿರುಗ ಹತ್ತಿದರು. ಅದೇ ಸಮಯದಲ್ಲಿ ಸಪ್ತರ್ಷಿಗಳಲ್ಲಿ ಒಬ್ಬನಾದ ಭೃಗು ಮಹರ್ಷಿಯೂ ತನ್ನ ಮಂತ್ರ ಬಲದಿಂದ ಮಾಯಾವಿಗಳನ್ನು ಹುಟ್ಟಿಸಿ ಶಿವನ ಗಣಗಳನ್ನು ಹಿಮ್ಮೆಟ್ಟಿಸಿದನು. ಇದನ್ನು ಕಂಡು ನಂದಿ, ತುಂಬುರ ಮುಂತಾದವರು ಶಿವನ ಆಸ್ಥಾನಕ್ಕೆ ತೆರಳಿ ಸಕಲ ವೃತ್ತಾಂತವನ್ನು ಅವನಿಗೆ ನಿವೇದಿಸಿದರು.

ಈ ವಿಚಾರವನ್ನು ಕೇಳಿದ ಶಿವನು ಪ್ರಳಯ ರುದ್ರನಾಗಿ ತನ್ನ ಜಟೆಯನ್ನು ಕೋಪದಿಂದ ನೆಲಕಪ್ಪಳಿಸಿದನು. ಇದರಿಂದ ಆ ಸ್ಥಳದಲ್ಲಿ ಕಾಲ ರುದ್ರನಾದ 'ವೀರಭದ್ರ'ನೂ ಮತ್ತು 'ಕಾಳಿ' ದೇವಿಯೂ ಪ್ರಕಟವಾದರು ಮತ್ತು ಅವರು ಶಿವನಿಗೆ "ಒಡೆಯನೇ, ನಮ್ಮಿಂದ ಯಾವ ಕಾರ್ಯವು ಆಗಬೇಕಾಗಿದೆ ಎಂಬುದಕ್ಕೆ ಅಪ್ಪಣೆಯನ್ನು ಕೊಡಬೇಕು" ಎಂದು ಕೇಳಿದರು. ಆಗ ಶಿವನು 'ವೀರಭದ್ರ'ನಿಗೆ ಸೊಕ್ಕಿನ ದಕ್ಷನನ್ನು ಸಂಹರಿಸಿ ಅವನ ಸೊಕ್ಕನ್ನು ಅಡಗಿಸಬೇಕೆಂದು ಹೇಳಿದನು. ಆಗ 'ವೀರಭದ್ರ'ನು 'ಕಾಳೀ' ಸಮೇತನಾಗಿ ಸಕಲ ಶಿವಗಣಗಳೊಡಗೂಡಿ ಹೂಂಕರಿಸುತ್ತಾ ಯಜ್ಞ ಮಂಟಪಕ್ಕೆ ಆಗಮಿಸಿದನು. ಆಗ ಎಲ್ಲೆಡೆಗೆ ಹಾಹಾಕಾರವೂ, ಉತ್ಪಾತಗಳೂ, ಮತ್ತು ಭೂಕಂಪಗಳೂ ಉಂಟಾಗ ಹತ್ತಿದವು. ಅದಲ್ಲದೆ ಅನೇಕ ತರಹದ ಧೂಮಕೇತುಗಳು ಪ್ರಕಟವಾಗಹತ್ತಿದವು. ಇದನ್ನು ಕಂಡು ಅನೇಕ ದೇವತೆಗಳೂ ಅಲ್ಲಿಂದ ಕಾತ್ತಿಗೆಯಲಾರಂಭಿಸಿದರು. ಇದೆಲ್ಲವನ್ನು ನೋಡಿ 'ಭೃಗು' ಮಹರ್ಷಿಯು ಮತ್ತೆ ತನ್ನ ಮಾಯಾವಿಗಳನ್ನು ಪ್ರಕಟಮಾಡಿದನು. ಆದರೆ 'ವೀರಭದ್ರನ' ಮುಂದೆ ಅವರ ಆಟವೂ ನಡೆಯಲಿಲ್ಲ. ಕೊನೆಗೆ 'ವೀರಭದ್ರ' ನು ದಕ್ಷನನ್ನು ಮಂಟಪದಿಂದ ಹೊರಗೆಳೆದು ತಂದು ಅವನ ರುಂಡವನ್ನು ಮುಂಡದಿಂದ ಬೇರೆಮಾಡಿದನು. ಇದರಿಂದ ದಕ್ಷನ ಪತ್ನಿಯೂ ಗೋಳಾಡಹತ್ತಿದಳು. ಆಗ 'ವೀರಭದ್ರ'ನು ಆ ರುಂಡವನ್ನು ತಂದು ಶಿವನ ಪಾದದ ಮೇಲೆ ಕೆಡವಿದನು.

ಕೊನೆಗೆ ಎಲ್ಲ ದೇವತೆಗಳೂ ದಕ್ಷನ ಪತ್ನಿಯನ್ನೊಡಗೂಡಿ ಶಿವನ ಬಳಿ ಬಂದು ಕ್ಷಮೆ ಯಾಚಿಸಿದರು. ಆಗ ಶಿವನು ಶಾಂತನಾಗಿ ಒಂದು ಆಡಿನ ರುಂಡವನ್ನು ದಕ್ಷನಿಗೆ ಹಚ್ಚಿ ಅವನನ್ನು ಮತೆ ಬದುಕಿಸಿದನು. ಆಗ ಎಲ್ಲರಿಗೂ ಸಂತೋಷವಾಯಿತು. ಮತ್ತು ದಕ್ಷನು ತನ್ನ ಸೊಕ್ಕಿನ ನಡತೆಗಾಗಿ ಪಶ್ಚಾತ್ತಾಪ ಪಟ್ಟು ಶಿವನಲ್ಲಿ ಕ್ಷಮೆ ಯಾಚಿಸಿದನು, ಶಿವನು ಅವನನ್ನು ಮನ್ನಿಸಿದನು. ಕೊನೆಗೆ ದೇವತೆಗಳೂ ಸಂತೋಷದಿಂದ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು ಶಿವನು ಕೂಡಾ ಹಿಮಾಲಯದಲ್ಲಿರುವ 'ಕೈಲಾಸ' ಪರ್ವತಕ್ಕೆ ತಪಸ್ಸು ಮಾಡಲು ತೆರಳಿದನು.

**ಶ್ರೀ ವಿ. ವಿ. ಕುಲಕರಣಿ**

★

# ನಿಮಗಿದು ತಿಳಿದಿದಿಯೇ?

1. ಶ್ರೀ ವೆಂಕಟೇಶ್ವರಸ್ವಾಮಿಯ ತಿರುಮಲೆಯಲ್ಲಿರಲು ಸ್ಥಳ ನೀಡಿದವರಾರು ?
2. ಮೊದಲನೆಯ ವೇದವಾವುದು ?
3. ಐದನೆಯ ವೇದವೆಂದು ಕರೆಯುವುದಾವುದನ್ನು ?
4. ಕುಮಾರವ್ಯಾಸನ ಮೊದಲ ಹೆಸರೇನು ?
5. ಗದುಗಿನ ಭಾರತದಲ್ಲಿ ಎಷ್ಟು ಪರ್ವಗಳಿವೆ ?
6. ಕರ್ನಾಟಕದಲ್ಲಿ ಗುಹಾಂತರ್ದೇವಾಲಯಗಳಿರುವ ಸ್ಥಳ ಯಾವುದು ?
7. ಗೊಮ್ಮಟ ಜಿನಸ್ತುತಿಯನ್ನು ಬರೆದವರಾರು ?
8. ವಿಜಯನಗರದ ಅರಸರ ದಕ್ಷಿಣದ ರಾಜಧಾನಿ ಯಾವುದಾಗಿತ್ತು ?
9. ತಿರುಮಲೆಯ ವೆಂಕಟೇಶ್ವರನನ್ನು ಹನ್ನೆರಡುವರ್ಷ ಪೂಜಿಸಿದ ಗುರುಗಳು ಯಾರು ?
10. ರಾಮಚಂದ್ರನು ಕೊಂದ ಹೆಂಗಸಿನ ಹೆಸರೇನು ?
11. ಹೊಯ್ಸಳ ಶಿಲ್ಪದ ಪರಾಕಾಷ್ಠತೆಯ ಸ್ಥಿತಿಯನ್ನು ಪಡೆಯಬಹುದಾಗಿದ್ದ ಸ್ಥಳ ಯಾವುದು ?
12. ವಿವೇಕಾನಂದ ಶಿಲಾಸ್ಮಾರಕ ಕೇಂದ್ರ ಎಲ್ಲಿದೆ ?
13. ವಿವೇಕಾನಂದರ ಗುರು ಯಾರು ?
14. ಕುಂತಿಯ ಸಾಕುತಂದೆಯ ಹೆಸರೇನು ?
15. ಸಾವಿತ್ರಿಯ ಪತಿ ಯಾರು?

( ಉತ್ತರಗಳಿಗಾಗಿ 38 ನೇ ಪುಟ ನೋಡಿ )

(20ನೇ ಪುಟದಿಂದ)

ಮುದ್ದು ಬಾಲ ಲೀಲೆಗಳನ್ನು ಹೃದಯಂಗಮವಾಗಿ ಚಿತ್ರಿಸುತ್ತ ಭಕ್ತಿಯ ಸೋಪಾನಗಳನ್ನು ಸಹೃದಯರಿಗೆ ತೋರಿಸಿ ಕೊಡುತ್ತಾಳೆ. ಅಕ್ಕಮಹಾದೇವಿಯು ಎಲ್ಲವನ್ನೂ ಎಲ್ಲರನ್ನೂ ಕೊನೆಗೆ ದೇಹಾಭಿಮಾನವನ್ನೂ ತ್ಯಜಿಸಿ ಅನುಭವ ಮಂಟಪದ ಶರಣರಿಂದ ಪರೀಕ್ಷಿತಳಾಗಿ ಚೆನ್ನ-ಮಲ್ಲಿಕಾರ್ಜುನನ ಧ್ಯಾನಮಾಡುತ್ತ ಅವನಲ್ಲಿ ಲೀನವಾಗಿ ಹೋಗುತ್ತಾಳೆ. ಆದರೆ ಗಿರಿಯಮ್ಮನು ತಾನಿರುವ ಮನೆಯನ್ನೇ ರಂಗನಾಥನ ಆರಾಧನಾ ಸ್ಥಾನವನ್ನಾಗಿ ಮಾಡಿಕೊಂಡು ತನ್ನ ದಿನ ನಿತ್ಯದ ಕೆಲಸ ಕಾರ್ಯಗಳನ್ನು ಮಾಡುತ್ತಲೇ ಪರಮಾತ್ಮನನ್ನು ಕಂಡುಕೊಂಡು ಅನುಭಾವಿಯಾದಳು. ಒಂದು ಕುಟುಂಬದ ಗೃಹಿಣಿಯಾಗಿ ಅತ್ತೆಯ ಸೊಸೆಯಾಗಿ ಬಾಳಿದ ಗಿರಿಯಮ್ಮ ತನ್ನ ಜೀವನಾನುಭವಗಳ ಪರಿಧಿಯ ಒಳಗೇ ರಚಿಸಿದ ಅವಳ ಕಾವ್ಯಗಳಲ್ಲಿ ಪಾಂಡಿತ್ಯವನ್ನಾಗಲೀ, ಅಪ್ರತಿಮ ಪ್ರತಿಭೆಯನ್ನಾಗಲೀ ಗುರುತಿಸಬೇಕಾದ ಅಗತ್ಯವಿಲ್ಲದಿದ್ದರೂ ಎಲ್ಲೆಲ್ಲೂ ಭಕ್ತಿರಸವು ಮಾತ್ರ ತಂತಾನಾಗಿಯೇ ಹರಿದಿದೆ ಎಂಬುದರಲ್ಲಿ ಸಂಶಯವಿಲ್ಲ. ತಾನು ಯಾವ ಪಂಡಿತರ ಮೆಚ್ಚುಗೆಗಾಗಲೀ ಬರೆಯದೆ ಸಾಮಾನ್ಯ ಜನತೆಗೆಂದೇ ಸರಳವಾಗಿ ರಚಿತವಾದ ಕೃತಿಗಳು ತನ್ನವೆಂದೂ ಲೋಪವಿದ್ದರೆ ಮನ್ನಿಸಿ ತಿದ್ದಿ ಓದಿರೆಂದೂ ಹೇಳಿಕೊಂಡಿರುವಳು. ಹೀಗೆ ನಿರಭಿಮಾನಳಾಗಿ ಅಂದಿನ ಸಾಮಾಜಿಕ ಪರಿಸರದಲ್ಲಿ ಅಭಿವ್ಯಕ್ತಿಸ್ವಾತಂತ್ರ್ಯವನ್ನು ಪಡೆದು ಸಾಹಿತ್ಯ ಕೃಷಿ ನಡೆಸಿ ಸಾರ್ಥಕತೆಯ ಸಾಯುಜ್ಯ ಪಡೆದವಳು ಗಿರಿಯಮ್ಮ. ಮೀರ, ಅಕ್ಕಮಹಾದೇವಿಯರಂತೆ ಗಿರಿಯಮ್ಮನೂ ಅನು-ಭಾವಿ ಸ್ತ್ರೀಯಾಗಿ ಸಾಹಿತ್ಯಾರಾಧನೆಯ ಮುಖಾಂತರ ಭಗವಂತನ ಸಾನ್ನಿಧ್ಯ ಪಡೆದವಳಾದಳು.

★

( 22ನೇ ಪುಟದಿಂದ )

ಎನ್ನುತ್ತಾ ಆತನನ್ನು ಎಬ್ಬಿಸಿ ಆಲಿಂಗಿಸಿಕೊಳ್ಳಲು ಹೋದಳು. ಭೀಮನಿಗೆ ಏನು ಮಾಡಲೂ ತೋಚದಾಗಿ "ಕೃಷ್ಣಾ" ಎಂದು ಗಟ್ಟಿಯಾಗಿ ಕಿರುಚಿಕೊಂಡನು.

ಎಲ್ಲವನ್ನೂ ಕಾಣುತ್ತಿದ್ದ ಕೃಷ್ಣನಿಗೆ ಭೀಮಸೇನನ ಮನದ ಗೊಂದಲ ಅರಿವಾಗದೇ? ತಕ್ಷಣದಲ್ಲಿ ತಾನು ಸುಮ್ಮನಿದ್ದರೆ ಭೀಮನ ಕಥೆ ಇಂದಿಗೇ ಮುಗಿಯುವುದು ಎಂದು ಚಿಂತಿಸಿ ತನ್ನ ಶಕ್ತಿಯನ್ನು ಆ ಕ್ಷಣದಲ್ಲಿ ಭೀಮಸೇನನಿಗೆ ಕೊಟ್ಟನು ಆಪದ್ಬಾಂಧವ.

ಆ ತಕ್ಷಣ ಭೀಮಸೇನನ ಶಕ್ತಿ ಅಗಾಧವಾಗಿ ಪರಿಣಮಿಸಿ ತಾನೂ ದ್ರೌಪದಿಯನ್ನು ಆಲಿಂಗಿಸಿಕೊಂಡನು. ಕಾಳಿಕಾದೇವಿಯ ಅವತಾರವೇ ಆದ ದ್ರೌಪದಿಗೆ ಶ್ರೀಹರಿಯ ಶಕ್ತಿದಾನದ ಅರಿವು ದಿವ್ಯದೃಷ್ಟಿಯಿಂದ ತಕ್ಷಣವೇ ಆಯಿತು. ಆಗ ಆಕೆಗೆ ಅಸಾಧ್ಯ ಕೋಪ ಬಂದಿತು. ತಕ್ಷಣವೇ ಶ್ರೀಕೃಷ್ಣ ಪರಮಾತ್ಮನಿಗೆ ಶಾಪ ನೀಡಿದಳು "ಕೃಷ್ಣಾ...... ಅಂದು ನನ್ನ ಸ್ವಯಂವರದ ಸಭೆಯಲ್ಲಿ ನಾನು ನಿನ್ನನ್ನು ವರಿಸುವೆನೆಂದಾಗ, ನೀನು ನನ್ನು ವರಿಸಬಾರದು ನನ್ನ ಅಂಶವೇ ಆದ ಅರ್ಜುನನನ್ನು ವರಿಸು" ಎಂದು ನನ್ನ ನೆರಳಾಗಿ ನನ್ನನ್ನು ಕಾಯುವ ಭರವಸೆ ನೀಡಿ, ಆ ಮಹಾಸಭೆಯಲ್ಲಿ ನನ್ನನ್ನು ತಂಗಿ ಎಂದು ಸಂಬೋಧಿಸಿ, ಈಗ ನಿನ್ನ ಪತಿಗೆ ನಿನ್ನ ಶಕ್ತಿಯನ್ನಿತ್ತು ನನ್ನನ್ನು ಪರೋಕ್ಷವಾಗಿ ಆಲಿಂಗಿಸಿದೆ ಅಲ್ಲವೆ?............ ಪತಿಯ ಸ್ಥಾನದಲ್ಲಿ. ಸೋದರನಾದ ನೀನು ನನ್ನನ್ನೇ ಆಲಂಗಿಸಿಕೊಂಡ ತಪ್ಪಿಗೆ ನೀನು ನಿನ್ನ ತಂಗಿಯನ್ನೇ ವಿವಾಹವಾಗು ಇಲ್ಲವಾದರೆ ನಿನ್ನ ತಲೆ ಸಹಸ್ರ ಹೋಳಾಗಲಿ, ಇದೇ ನಾನು ನಿನಗೀಯುವ ಶಾಪ" ಎಂದು ನುಡಿದು ತನ್ನ ಕೋಪಾಗ್ನಿಯನ್ನು ಶಮನ ಮಾಡಿಕೊಂಡಳು. ಹೀಗೆ ಎಲ್ಲರನ್ನೂ ಆಡಿಸುವ ಸೂತ್ರಧಾರ ಶ್ರೀಕೃಷ್ಣ ಪರಮಾತ್ಮನು ದ್ರೌಪದಿಯಿಂದ ಶಾಪಗ್ರಸ್ತನಾದನು.

ಮುಂದೆ ಈ ಶಾಪದ ಪರಿಹಾರಕ್ಕಾಗಿಯೇ ತೀರ್ಥಯಾತ್ರೆಗೆಂದು ಹೋಗಿದ್ದ ಅರ್ಜುನನನ್ನು ಕರೆಸಿ ಸುಭದ್ರೆಯನ್ನು ತನ್ನ ಅಂಶವನ್ನೆ ಹೊತ್ತಿರುವ ಆತನಿಗೆ ವಿವಾಹ ಮಾಡಿಸಿದನು. ಇಲ್ಲವಾಗಿದ್ದರೆ ಆಗ ಸುಭದ್ರೆಯು ಸುಯೋಧನನನ್ನು ವಿವಾಹವಾಗಬೇಕಾಗಿತ್ತು. ಆ ಶಾಪದಿಂದ ವಿಮುಕ್ತನಾಗಲು ಆ ಭಗವಂತ ಮತ್ತೊಂದು ಬಗೆಯ ಹೊಸ ನಾಟಕವಾಡಿಸಬೇಕಾಯಿತು.

ಇಲ್ಲವಾದಲ್ಲಿ ದ್ರೌಪದಿಯ ಶಾಪ ನೇರ ರೀತಿಯಲ್ಲಿ ಫಲಿಸಬೇಕಾಗುತ್ತಿತ್ತು. ಹೀಗೆ, ದ್ರೌಪದಿಯ ಶಾಪ ಮತ್ತೊಂದು ರೀತಿ ಫಲಿಸಿತು. +

(ಕೇಳಿದ ಕಥೆ)



# ತೀರ್ಥಕ್ಷೇತ್ರ ದರ್ಶನ

## ರಂಗಸ್ಥಳ

ಕೋಲಾರ ಜಿಲ್ಲೆಗೆ 'ನಂದಿಬೆಟ್ಟ'ದಂತಹ ಸುಂದರ ಕೊಡುಗೆಯನ್ನು ನೀಡಿರುವ ಚಿಕ್ಕಬಳ್ಳಾಪುರ ತಾಲ್ಲೂಕು ಇಂಥದೇ ಮತ್ತೊಂದು ರಮ್ಯವಾದ ಕಾಣಿಕೆಯನ್ನು ಕೊಟ್ಟಿದೆ. ಚಿಕ್ಕಬಳ್ಳಾಪುರದಿಂದ ಸುಮಾರು ಮೂರು ಮೈಲಿಗಳ ದೂರದಲ್ಲಿರುವ 'ರಂಗಸ್ಥಳ'ವು ಪ್ರಶಾಂತವಾದ ಹಾಗೂ ರಮಣೀಯವಾದ ಸ್ಥಳ. ಇಲ್ಲಿರುವ ಶ್ರೀ ರಂಗನಾಥಸ್ವಾಮಿ ದೇವಾಲಯ ವಿಶಾಲವಾದದ್ದೂ ಆಕರ್ಷಣೀಯವಾದದ್ದೂ ಆಗಿದೆ. ಇದೊಂದು ಧಾರ್ಮಿಕ – ಐತಿಹಾಸಿಕ ಪರಂಪರೆಗಳ ಪ್ರತೀಕ. ಬೆಟ್ಟಗಳ ನಡುವೆ, ಭೌಗೋಳಿಕ ಹಿನ್ನೆಲೆಯಲ್ಲಿರುವ ಈ ಸ್ಥಳವು ಹೆಚ್ಚಿನ ಪ್ರಚಾರವನ್ನು ಪಡೆಯದಿರುವುದು ಅಚ್ಚರಿಯ ಸಂಗತಿ.

'ರಂಗಸ್ಥಳ'ದ ಶ್ರೀರಂಗನಾಥಸ್ವಾಮಿಯ ದೇವಸ್ಥಾನದ ನಿರ್ಮಾಣದ ಕಾರಣ, ಕಾಲಗಳ ಬಗ್ಗೆ ಯಾವುದೇ ಮಹತ್ವದ ದಾಖಲೆಗಳಿಲ್ಲ, ವಿಜಯನಗರೋತ್ತರ ಕಾಲದಲ್ಲಿ ಇದನ್ನು ಕಟ್ಟಿರುವ ಸಾಧ್ಯತೆಗಳು ಹೆಚ್ಚಿನ ಮಟ್ಟದ್ದಾಗಿ ಕಂಡುಬರುತ್ತದೆ. ಈ ಊಹೆಗೆ ಕಾರಣವೆಂದರೆ, ಅಣಕೂರಿನ ಸು. ೧೬೮೬ರ ಶಾಸನ, ಹಾಗೂ ದೇವಾಲಯದ ಮಾದರಿ ಮತ್ತು ಇಲ್ಲಿನ ಕೆತ್ತನೆ ಕೆಲಸಗಳು.

ಈ ಕ್ಷೇತ್ರವು ಮಠ ಸಂಬಂಧವಾದ ಜಗುಲಿ ಅಥವಾ ಅಂಗಳವನ್ನು ಹೋಲುತ್ತದೆ.

ಇಲ್ಲಿರುವ ದೇವಸ್ಥಾನವು ಗರ್ಭಗೃಹ, ಸುಖನಾಸಿ, ಮುಖಮಂಟಪ ಹಾಗೂ ಹೊರಮಂಡಪಗಳಿಂದ ಕೂಡಿದ್ದಾಗಿದೆ. ದೇವಾಲಯದ ಮುಖ್ಯದ್ವಾರವು ದಕ್ಷಿಣದ ಕಡೆಗಿದ್ದು, ಪೂರ್ವ ದಿಕ್ಕಿಗೆ ಬಿಟ್ಟರೆ ಉಳಿದೆಲ್ಲ ಕಡೆಗೂ ಮಂಟಪ ಹಾಗೂ ಚಿಕ್ಕ ದ್ವಾರಗಳಿರುತ್ತದೆ. ವೆರಾಂಡದಲ್ಲಿರುವ ಅತ್ಯಂತ ಎತ್ತರವಾದ ಹಾಗೂ ದೊಡ್ಡದಾದ ಕಂಬಗಳು ಒಂದೇ ಕಲ್ಲಿನಲ್ಲಿ ಕಡೆದಿದ್ದು, ಇದರ ಮೇಲಿರುವ ಸವಾರರ ಚಿತ್ರ ಮನಸೆಳೆಯುವಂತಿದೆ.

ಇಲ್ಲಿರುವ ಮುಖಮಂಟಪವು ಉತ್ತಮ ಶಿಲ್ಪ ಮಾದರಿಯಿಂದ ಕೂಡಿದ್ದು ಇಲ್ಲಿನ ಸಾಲು ಕಂಬಗಳ (೨೪) ಮೇಲೆ ಅನೇಕ ಕೆತ್ತನೆಗಳಿವೆ. ಸಿಂಹ ಸವಾರರು ಮೊದಲಾದ ಕೆತ್ತನೆಗಳು ಮೋಹಕವಾಗಿವೆ. ಮಹಾದ್ವಾರದಲ್ಲಿರುವ ಕಂಬಗಳೆರಡು ಪುರುಷ–ಸ್ತ್ರೀಯರ ಚಿತ್ರಗಳಿಂದ ಕೂಡಿ ಸುರುಳಿಯಾಕಾರದ ಚಿತ್ರ ಕೆಲಸದಿಂದ ತುಂಬಿದೆ. ಇಲ್ಲಿನ ಬಲಿಪೀಠ ಹಾಗೂ ಧ್ವಜಸ್ತಂಭವನ್ನು ಕಲಾತ್ಮಕವಾಗಿ ಕೆತ್ತಲಾಗಿದೆ.

ಶ್ರೀರಂಗನಾಥಸ್ವಾಮಿಯು ಪಶ್ಚಿಮಕ್ಕೆ ತಲೆಯಿಟ್ಟು, ೫ ಹೆಡೆ ಹಾವಿನ ಮೇಲೆ ಶೇಷಶಾಯಿಯಾಗಿರುವ ನೋಟವನ್ನು ಗರ್ಭಗೃಹದಲ್ಲಿ ಕಾಣಬಹುದು. ಸುಮಾರು ನಾಲ್ಕು ಅಡಿಯಿರುವ, ನುಣ್ಣನೆಯ, ಕಪ್ಪಾದ ಸ್ವಾಮಿಯ ವಿಗ್ರಹವು ಎಂತಹವರನ್ನೂ ಮುಗ್ಧರನ್ನಾಗಿ ಮಾಡುತ್ತದೆ. ಸ್ವಾಮಿಯ ಪಾದದಡಿ ಶ್ರೀದೇವಿ ಭೂದೇವಿಯವರು ಕುಳಿತಿದ್ದಾರೆ. ಕ್ಷೀರಸಾಗರದಲ್ಲಿ ಶೇಷಶಾಯಿಯಾದ ನಾರಾಯಣನು ವಿಷ್ಣುವೇ. ಆತನ ಪಾದದ ಬಳಿ ಲಕ್ಷ್ಮಿ ಕುಳಿತಿರಲು ತನ್ನ ನಾಭಿಯಿಂದ ಉದ್ಭವಿಸಿದ ಕಮಲದಲ್ಲಿ ಬ್ರಹ್ಮನು ಹುಟ್ಟಿ ಬಂದಿರಲು ನಾರಾಯಣನು ಮಲಗಿದ್ದಾನೆ. ವಿಷ್ಣುವಿನ ಈ



ಕಪ್ಪುಶಿಲೆಯ ಶ್ರೀ ರಂಗನಾಥಸ್ವಾಮಿ

ಶ್ರೀ ಕೆ. ಆರ್. ನರಸಿಂಹನ್

ಚಿತ್ರಗಳು :
ಶ್ರೀ ಜಿ. ಸೋಮಶೇಖರ



ಕಂಚಿನ ಆಳ್ವಾರ್ ವಿಗ್ರಹ

ರೂಪವನ್ನು 'ರಂಗನಾಥ' ನೆಂದು ಆರಾಧಿಸ ಲಾಗುತ್ತಿದೆ. ಸಪ್ತಋಷಿಗಳು ಪ್ರತಿಷ್ಠಾ ಪಿಸಿದರೆಂದು ಸ್ಥಳಪುರಾಣಿಕರ ಅಂ ಬೋಣ.

ನಾರಾಯಣನೆಂದರೆ ನಿತ್ಯವಾದ ನಿವಾಸ ಸ್ಥಾನವನ್ನು ಹೊಂದಿರುವವನು ಎಂದರ್ಥ. ಪರಮ ಪುರುಷ ಅಥವಾ ಸರ್ವೋತ್ತಮ ನಾದ ಸರ್ವೇಶ್ವರನ ನೀತಿ ಅಥವಾ ಸೌಂ ದರ್ಯ ಗುಣಗಳಿಗೆ ಶ್ರೀವೈಷ್ಣವ ಧರ್ಮದ ಗುರುಗಳು ಪ್ರಾಧಾನ್ಯ ಕೊಟ್ಟಿದ್ದಾರೆ. ರಾಮಾನುಜರು ಬೋಧಿಸಿದ ಈ ದರ್ಶನವು ವಿಶಿಷ್ಟಾದ್ವೈತವೆಂದೂ ಪ್ರಸಿದ್ಧವಾಗಿದೆ. ಇವರ ಮತದಲ್ಲಿ ಭಗವಂತನು ಭಕ್ತನನ್ನು ಪ್ರೇಮಿಸುವವನೂ ಸೌಶೀಲಯುಕ್ತನೂ ಪರಮಸುಂದರನೂ ಆಗಿ ಲಾವಣ್ಯ ಸಮುದ್ರ ನಾಗಿದ್ದಾನೆ. ಆದ್ದರಿಂದಲೇ ಇವನ ವಾಸ ಸಮುದ್ರದಲ್ಲಿ ಎಂದು ಹೇಳಬಹುದೇನೊ!

ಇಲ್ಲಿನ 'ಗರ್ಭ ಗೃಹ' ವನ್ನು ಕಟ್ಟಿರುವ ಮಾದರಿಯೂ ಇದೇ ಆಗಿದೆ. ಶ್ರೀರಂಗನಾಥ ನನ್ನು 'ಬುಟ್ಟಿ' ಯೊಳಗಿಟ್ಟಂತೆ ಕಂಡು ಬರುತ್ತದೆ. ವಿಭೀಷಣ ಗಣೇಶನಿಗೆ ಇದನ್ನು ಒಪ್ಪಿಸುವಂತೆ ಇದರ ಕಲ್ಪನೆಯಿದೆಯೆಂ ಬುದು ಧಾರ್ಮಿಕ ಜಿಜ್ಞಾಸುಗಳ ಅಭಿ ಪ್ರಾಯ. ಹಾಗೆಯೇ ಇಂಥದೊಂದು ಹೇಳಿಕೆ 'ಶ್ರೀರಂಗ ಮಹಾತ್ಮೆ' ಯಲ್ಲಿಯೂ ಇದೆಯೆಂಬುದು ವಿವರಣಕಾರರ ಮತವಾ ಗಿದೆ. 'ಗರ್ಭಗೃಹ'ದಲ್ಲಿ ಪ್ರದಕ್ಷಿಣೆ ಮಾಡು ವವರಿಗೆ ಈ ಸಂಗತಿ ಹೆಚ್ಚಿನ ಮಟ್ಟಿಗೆ ಅನುಭವಕ್ಕೆ ಬರಬಹುದು.

ಗರ್ಭಗೃಹದ ಪ್ರದಕ್ಷಿಣಾ ಪಥದಲ್ಲಿ ಎದುರು ಬದುರಾಗಿ ಎರಡು ಕೋಳಗಳಿವೆ. ಇಲ್ಲಿ ಶ್ರೀ ವೈಷ್ಣವ ಧರ್ಮದ ಆಳ್ವಾರರು ಹಾಗೂ ಆಚಾರ್ಯರ ವಿಗ್ರಹಗಳನ್ನು ಕಾಣ ಬಹುದು. 'ಆಳ್ವಾರ್ ಎಂದರೆ 'ಸ್ವಾಮಿ ಪ್ರೇಮದಲ್ಲಿ ಲೀನವಾದವರು' ಎಂದರ್ಥ. ಸಂತರೂ ಕವಿಗಳೂ ಆದ ಅವರು ಪಂಡಿ ತರೂ ದಾರ್ಶನಿಕರೂ ಆದ ಆಚಾರ್ಯರು ಗಳಿಗಿಂತ ಭಿನ್ನರು. ಧಾರ್ಮಿಕ ವಾತಾವರ ಣಕ್ಕೆ ಇದು ಹೆಚ್ಚಿನ ಗಾಳಿ ಬೆಳಕುಗಳನ್ನು ತುಂಬಿ ಕೊಟ್ಟಂತಿದೆ. ಸುಂದರ ಕೆತ್ತನೆ ಯಿಂದ ಕೂಡಿದ ಆಳ್ವಾರರ ಲೋಹ ವಿಗ್ರ ಹವೂ ಜನರನ್ನು ಸೆಳೆಯುತ್ತದೆ.

ಇನ್ನೂ ದೇವಾಲಯದ ಹೊರಗಡೆಗೆ ಬಂದರೆ ಇಲ್ಲಿನ ಎರಡು ದೊಡ್ಡ ಕೊಳಗಳು ನಮ್ಮನ್ನು ಕೈ ಬೀಸಿ ಕರೆಯುತ್ತವೆ. ಒಂದು ಚತುರ್ದಳಾಕಾರವಾಗಿ ಮತ್ತೊಂದು ಅಷ್ಟ ದಳಾಕಾರವಾಗಿ ಇದೆ. ಇದನ್ನು ಇಲ್ಲಿ ಸ್ಥಳೀಯವಾಗಿ ಶಂಖಚಕ್ರ ತೀರ್ಥಗಳೆಂದು ಕರೆಯುತ್ತಾರೆ. ಈ ಕೊಳಗಳ ಕಟ್ಟಡ ವಿಶೇಷ ರೀತಿಯಲ್ಲಿದ್ದು ವಿಜಯನಗರ ಕಾಲದ "ರಚನೆ"ಗಳನ್ನು ಮನದಟ್ಟು ಮಾಡಿ ಕೊಡುವಂತಿದೆ.

'ರಂಗಸ್ಥಳ'ವೊಂದು ಶ್ರೀ ವೈಷ್ಣವ ಮತ ಪಂಥವೊಂದರ ಕಾರಣ ಸಂಬಂಧಗಳನ್ನು ಪಡೆದಿದ್ದರೂ ಇದು ಎಲ್ಲ ಧಾರ್ಮಿಕ ಆಸ ಕ್ತರ ಕೇಂದ್ರ ಸ್ಥಳವಾಗಿದೆ. ಕರ್ನಾಟಕ ದಲ್ಲಿ ಭಕ್ತಿ–ಪ್ರವೃತ್ತಿಗಳ ಶ್ರೀಮಂತ ಪರಂ ಪರೆಯೊಂದನ್ನು ಹಾಕಿ ಕೊಟ್ಟ ಶ್ರೀವೈಷ್ಣವ ಧರ್ಮವು ಹೊಯ್ಸಳ ರಾಜರಲ್ಲಿ ಬೇರೂರಿ, ವಿಜಯನಗರ ಆಶ್ರಯ ಪಡೆದು ಮುಂದು ವರಿಯಿತು. ಮೇಲುಕೋಟೆಯ ಚೆಲುವ ನಾರಾಯಣ, ಶ್ರೀರಂಗಪಟ್ಟಣದ ರಂಗನಾಥ ಸ್ವಾಮಿಯ ದೇವಾಲಯಗಳು ಈ ಸಂಬಂಧ ವಾಗಿ ಬೆಳೆದು ಬಂದಿರುವ ಪ್ರಮುಖ ದೇವಾ ಲಯಗಳಾಗಿವೆ. ಅವುಗಳ ಸ್ವಲ್ಪವಾದರೂ ಲಕ್ಷಣ, ಸಮನ್ವಯಗಳನ್ನು ಪಡೆದುಕೊಂಡು ಹುಟ್ಟಿರುವ 'ರಂಗಸ್ಥಳ' ದ ದೇವಾಲಯ ನಿಜಕ್ಕೂ ಒಂದು ಅಲೌಕಿಕ ಅನುಭವವನ್ನು ತಂದುಕೊಡುವುದರಲ್ಲಿ ಸಂದೇಹವಿಲ್ಲ.

ಇಂದು ಇಲ್ಲಿ ಪ್ರೇಕ್ಷಕರ ಪ್ರವಾಸಿಗರ ಅನುಕೂಲಕ್ಕೆ ತಕ್ಕಂತೆ ಅನೇಕ ಸೌಲಭ್ಯ ಗಳನ್ನು ಕಲ್ಪಿಸಿಕೊಡಲಾಗಿದೆ. ಮದುವೆ ಮೊದಲಾದ ಕಾರ್ಯಗಳಿಗಾದರೂ ಸರಿ ಅಥವಾ ಏಕಾಂತವಾಗಿ ಮನಶ್ಶಾಂತಿಯನ್ನು ಪಡೆಯುವುದಕ್ಕಾದರೂ ಆಗಲಿ ಇದೊಂದು ಪ್ರಶಸ್ತವಾದ ಸ್ಥಳವಾಗಿದೆ, ಇಂತಹ ಸ್ಥಳ ಗಳ ದರ್ಶನ ಪರಮಾನಂದದ ಮೂಲಕ್ಕೆ ಆಧಾರವಾಗುತ್ತದೆಂಬುದು ಅರಿ ಯಬೇಕಾದ ಅಗತ್ಯವಾಗಿದೆ. ಡಿಸೆಂಬರ್ ತಿಂಗಳಿನಲ್ಲಿ ಇಲ್ಲಿ ರಥೋತ್ಸವವೂ ನಡೆಯುವು ದೆಂಬುದು ಗಮನಾರ್ಹ.



(13ನೇ ಪುಟದಿಂದ)

ಮಾಡಬೇಕೆಂದು ಕೇಳಿಕೊಂಡರು. ಆ ತಕ್ಷಣ ಆಚಾರ್ಯರು "ಏನಪ್ಪ ಸುಧಾವಾಕ್ಯವೇಂದರೆ ಕಾಲಿಗೆ ಗೆಜ್ಜೆಕಟ್ಟಿಕೊಂಡು ಕುಣಿಯುವ ಡಕ್ಕೆ ದಾಸರ ಪದವೆಂದು ತಿಳಿದಿರುವೆಯಾ?" ಎಂದು ಹೀಯಾಳಿಸಿ ನುಡಿಯಲು ಸಭೆಯಲ್ಲಿಂದ ಎದ್ದು ವಿಜ ದಾಸರು ಪಾಕಶಾಲೆಗೆ ಹೋಗಿ ನೀರುತರುವ ಪರಿ ಚಾರಕನ ಕೈಯನ್ನು ಹಿಡಿದುಕೊಂಡು ಸಭೆಗೆ ಬಂದು ಏನೂ ಅರಿಯದ ಶುಂಠನಂತಿರುವ ಕಣ್ವ ಶಾಖೆಯ ಆ ಪರಿಚಾರಕನ ತಲೆಯಮೇಲೆ ಅಕ್ಷತೆ ಯನ್ನು ಹಾಕಿ ತಮ್ಮ ಕೈಯಿಂದ ಅವನ ಕೈಹಿಡಿದು "ಏಲೋ ನೀನು ಈಗ ಸುಧಾನುವಾದ ಮಾಡು" ಎಂದು ಹೇಳಿದರು. ಅವನು ಮಾಡಿದ ಸುಧಾನು ವಾದ ಕೇಳಿ ಸಭೆ ಬೆರಗಾಯಿತು. ಮತ್ತೆ ವಿಜಯ ದಾಸರು ಆ ಪರಿಚಾರಕನ ಕೈ ಬಿಡಲು ಅವನು ಶುಂಠನಂತೆ ನಿಂತು ಬಿಟ್ಟನು. ಸುಬ್ಬಣ್ಣಾ ಚಾರ್ಯ ರಿಗೆ ದಾಸರ ಯೋಗ್ಯತೆ ತಿಳಿದು, ದಾಸರಲ್ಲಿಗೆ ನಡೆದು ಬಂದು ತಮಗೆ ಉಪದೇಶವನ್ನು ಮಾಡಿ ಶಿಷ್ಯನನ್ನಾಗಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿ ಕೊಂಡರು. ಶ್ರೀ ವಿಜಯದಾಸರು ಆಚಾರ್ಯರಿಗೆ ವೈರಾಗ್ಯೋದಯವಾಗಿರುವುದನ್ನು ಕಂಡು ತಮ್ಮ ಜೊತೆಯಲ್ಲಿ ಸ್ವಲ್ಪಕಾಲ ನಿಲ್ಲಿಸಿಕೊಂಡು ಹರಿ ದಾಸ ಪೀಠದಲ್ಲಿ ಅಭಿಷೇಕಮಾಡಿ 'ವ್ಯಾಸವಿಠಲ' ನೆಂಬ ಅಂಕಿತವನ್ನು ಆಚಾರ್ಯರಿಗೆ ಕರುಣಿಸಿ ದರು. ಪ್ರಖ್ಯಾತ ಸುಬ್ಬಣ್ಣಾ ಚಾರ್ಯರು ಹರಿದಾ ಸನಾಗಿ ತಮ್ಮ ಗುರುಗಳಾದ ಶ್ರೀ ವಿಜಯದಾಸ ರನ್ನು ಈ ಕೆಳಗಿನಂತೆ ಸ್ತೋತ್ರಮಾಡಿದ್ದಾರೆ.

"ಸ್ಮರಿಸಿ ಬದುಕಿರೋ ದಿವ್ಯಚರಣಕೆರಗಿರೋ
ದುರಿತ ತರಿದು ಪೊರೆವ ವಿಜಯ ಗುರುಗಳೆಂ ಬರ"

27 ನುಡಿಗಳಿಂದ ಕೂಡಿದ ಈ ಸ್ತೋತ್ರವು 'ವಿಜಯ ಕವಚ' ವೆಂದು ಪ್ರಸಿದ್ಧವಿದ್ದು ದಿನಾಲೂ ಈ ಸ್ತೋತ್ರವನ್ನು ಪ್ರಾತಃಕಾಲದಲ್ಲಿ ಭಕ್ತಿಯಿಂದ ಅನ್ನುವವರಿಗೆ ಅವರ ಇಷ್ಟಾರ್ಥ ಪೂರ್ಣವಾಗು ವದು.

ಇಂತಹ ಮಹಿಮೆಯುಳ್ಳ ಶ್ರೀ ವಿಜಯದಾಸರು ಅನೇಕ ಮಹಿಮೆಯನ್ನು ತೋರಿಸುತ್ತಾ ಅನೇಕ ರಿಗೆ ಗುರೂಪದೇಶ ಮಾಡಿದರು. ಶ್ರೀ ಗೋಪಾಲ ದಾಸರಿಗೆ ಗುರು ಎನಿಸಿಕೊಂಡರು. ಅಬಲೆಯ ಮಗನನ್ನು ಸಾಕಿ, ದೊಡ್ಡವನನ್ನಾಗಿ ಮಾಡಿ ಮೋದ ವಿಠಲನೆಂದು ಅಂಕಿತಕೊಟ್ಟು ಜೀವದಾನ ಮಾಡಿ ಅಪರೋಕ್ಷಜ್ಞಾನಿಯನ್ನಾಗಿ ಮಾಡಿ ದರು. ಅಹಂಕಾರಿ ಶ್ರೀನಿವಾಸಾಚಾರ್ಯರನ್ನು ಜ್ಞಾನಿಗಳನ್ನಾಗಿ ಮಾಡಿ ತಮ್ಮ ಪ್ರಿಯ ಶಿಷ್ಯಂದಿ ರಾದ ಶ್ರೀ ಗೋಪಾಲದಾಸರಿಂದ ಆಚಾರ್ಯರಿಗೆ 40 ವರುಷ ಆಯುರ್ದಾನ ಮಾಡಿಸಿದರು. ಅವರೇ ಮುಂದೆ ಶ್ರೀ ಜಗನ್ನಾಥದಾಸರೆಂದೆನಿಸಿ ಕೊಂಡರು. ಹಿಂದೆ ಭಾಗಿಯ ಕೇಶವರಾಯನು ಆದರದಿಂದ ಮಾಡಿದ ಒಂದು ದಿನದ ಅನ್ನದಾನಕ್ಕೆ ಪ್ರತಿಯಾಗಿ ದಾಸರು ಅವನ ಮಗನ ಅಪಮೃತ್ಯು ವನ್ನೇ ಪರಿಹರಿಸಿ ತಮ್ಮ ಆಯುಷದಲ್ಲಿಯ ಮೂರು ವರುಷಗಳ ಆಯುರ್ದಾನವನ್ನು ಮಾಡಿ ದರು. ಸತ್ಪಾತ್ರರಿಗೆ ಅನ್ನ ದಾನ ಮಾಡಿದ ಪ್ರಭಾವ ಕೇಶವರಾಯನ ವಂಶೋದ್ಧಾರವಾ ಯಿತು. ಶ್ರೀವಿಜಯದಾಸರಿಗೆ ವಯಸ್ಸು ಆದಮೇಲೆ ಅವರು ದೇಶ ಸಂಚಾರವಮಾಡುತ್ತಿರಲಿಲ್ಲ. ಅನೇಕ ಗ್ರಂಥಗಳನ್ನು ಮತ್ತು ಸುಳಾದಿ ಉಗಾಭೋಗಗ ಳನ್ನು ರಚಿಸಿ ಅಸಂಖ್ಯಪದಗಳನ್ನೇ ಮಾಡಿ ಹರಿ ಕೀರ್ತನೆ ಮಾಡುತ್ತಾ ಕಾಲಕಳೆದರು. ಅವರ ಕೀರ್ತನೆಯನ್ನು ಕೇಳಿ ಜನರು ತಮ್ಮ ಜನ್ಮ ಸಾರ್ಥಕಮಾಡಿ ಕೊಂಡು ಜ್ಞಾನವಂತರಾದರು. ವಿಜಯದಾಸರು ಮಾಡಿದ ಪದಗಳಲ್ಲಿ ರಸಭರಿತ ಭಕ್ತಿ ಮತ್ತು ದ್ವೈತಮತದಲ್ಲಿರುವ ಆದರ ಕಂಡು ಬರುತ್ತದೆ.

ತಮ್ಮ ಅಂತಿಮಕಾಲ ಸಮೀಪಿಸಿದಂತೆ ಚಿಪ್ಪ ಗಿರಿಯಲ್ಲಿ ವಾಸಮಾಡ ಬೇಕೆಂಬ ಅಭಿಲಾಷೆ ದಾಸ ರಿಗೆ ಉಂಟಾಯಿತು. ಅಲ್ಲಿಂದ ಅರ್ಧ ಮೈಲು ದೂರ ಒಂದು ಪುರಾತನವಾದ ಸರೋವರ ಮತ್ತು ವಟವೃಕ್ಷವಿತ್ತು ಆ ಸರೋವರದಲ್ಲಿ ಸ್ನಾನ ಆಹ್ನೀಕ ಗಳನ್ನು ಮಾಡಿಕೊಂಡು ವೃಕ್ಷಮೂಲದಲ್ಲಿ ಧ್ಯಾನ ಕ್ಕಾಗಿ ಕುಳಿತುಕೊಳ್ಳುತ್ತಿದ್ದರು. ಆ ಪ್ರದೇಶವು ಚಂದಪ್ಪನೆಂಬ ಕುರುಬನದಾಗಿತ್ತು. ಒಂದು ದಿನ ಚಂದಪ್ಪನು ದಾಸರಿಗೆ ನೀವು ಊರೊಳಗಿನ ದೊಡ್ಡ ದೊಡ್ಡ ದೇವಾಲಯಗಳನ್ನು ಬಿಟ್ಟು ಇಲ್ಲಿ ನಮ್ಮ ಭಾವಿಯಲ್ಲಿ ಸ್ನಾನ ಮಾಡುವ ಕಾರಣವೇ ನೆಂದು ಕೇಳಲು ದಾಸರು "ನಿನ್ನ ಭಾವಿಯ ಏಳ ನೆಯ ಮೆಟ್ಟಿಲಿನಲ್ಲಿ ದೇವರಿದ್ದಾನೆ. ಅದಕ್ಕೆ ನೀನೇನು ಮಾಡುವೆ" ಎಂದರು."ದೇವರಿದ್ದರೆ ಗುಡಿ ಕಟ್ಟಿಸುವೆ ಮತ್ತು ಭೂಮಿ ದಾನಮಾಡುವೆ" ಎಂದು ಚಂದಪ್ಪ ದಾಸರಿಗೆ ಹೇಳಿ ಭಾವಿಯಲ್ಲಿ ಬಗ್ಗಿ ನೋಡಿದ ಚಂದಪ್ಪನು. ಏಳನೆಯ ಮೆಟ್ಟ ಲಲ್ಲಿ ಗೋಪಾಕೃಷ್ಣನ ವಿಗ್ರಹವನ್ನು ಕಂಡು ಮಾತಿನಂತೆ ಗುಡಿ ಕಟ್ಟಿಸಿ ಕೊಟ್ಟ. ಭೂಮಿದಾನ ಮಾಡಿದ. ಶ್ರೀ ವಿಜಯದಾಸರು ಅಲ್ಲಿಯೇ ತಮ್ಮ ಕೊನೆಯ ದಿನಗಳನ್ನು ಪರಮಾತ್ಮನ ಧ್ಯಾನದಲ್ಲಿ ಆರಾಧನೆಯಲ್ಲಿ ಕಳೆಯುತ್ತಾ ಕಾರ್ತೀಕಶುದ್ಧ ದಶಮಿ ಗುರುವಾರ ಪ್ರಾತಃಕಾಲ ಕಣ್ಮರೆಯಾ ದರು.

"ಸ್ಮರಿಸಿ ಬದುಕಿರೋ ದಿವ್ಯಚರಣಕೆರಗಿರೋ
ದುರಿತ ತರಿದು ಪೊರೆವ ವಿಜಯಗುರುಗಳೆಂಬರಾ
ಇವರ ನಂಬಿದಾ ಜನಕೆ ಭಯವಿದೆಂಬುದು
ಹವಣವಾಗದೋ ನಮ್ಮವರ ಮತವಿದು"

★

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪ್ರಾ 8-30 |
| (ಆರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ಮ 1-00 | ಸಂ 6-00 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | ,, | 40-00 |
| 3. | ಪುಳಿಯೋಗರೆ | ,, | 50-00 |
| 4. | ಪೊಂಗಲು | ,, | 55-00 |
| 5. | ಸಕ್ಕರೆಪೊಂಗಲ್ | ,, | 65-00 |
| 6. | ಶಾಕರ ಭಾತ್ | ,, | 85-00 |
| 7. | ಕೇಸರೀ ಭಾತ್ | ,, | 90-00 |
| 8. | ಸೀರ | ,, | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

# ಬರಹಗಾರರಿಗೆ ಸಹಾಯ ಧನ

ತಿ. ತಿ. ದೇವಸ್ಥಾನಗಳು ಧಾರ್ಮಿಕ ಸಾಹಿತ್ಯ ಪ್ರಸಾರ ಯೋಜನೆಯಲ್ಲಿ ಲೇಖಕರಿಗೆ ಸಹಾಯಧನ ನೀಡಿ ಅವರ ಪುಸ್ತಕಗಳ ಪ್ರಕಟನೆಯಲ್ಲಿ ನೆರವು ನೀಡುತ್ತಿರುವುದು ಸಪ್ತಗಿರಿಯ ಪಾಠಕರಿಗೆ ತಿಳಿದ ಅಂಶವೇ ಆಗಿದೆ. 1980–81 ರ ಅವಧಿಯಲ್ಲಿ ಈ ರೀತಿ ಸಹಾಯಧನ ಪಡೆದು ಅಚ್ಚಿನ ಮನೆಗೆ ಹೊರಟಿರುವ ಹಲವು ಪುಸ್ತಕಗಳು ಇಲ್ಲಿವೆ. ಪ್ರಕಟವಾದಂತೆಲ್ಲಾ ಅವುಗಳು ದೊರಕುವ ವಿಳಾಸ, ಬೆಲೆ ಮೊದಲಾದ ವಿವರಗಳನ್ನು ಸಪ್ತಗಿರಿಯ ಓದುಗರ ಅನುಕೂಲಕ್ಕಾಗಿ ಪ್ರಕಟಿಸಲಾಗುವುದು.

| ಪುಸ್ತಕದ ಹೆಸರು | ಭಾಷೆ |
|---|---|
| ಬ್ರಹ್ಮಸೂತ್ರಭಾಷ್ಯ ಸಂಪುಟ 3, 4, * | ಕನ್ನಡ |
| ಶ್ರೀಮದ್ಭಾಗವತ | ಕನ್ನಡ |
| ಗೀತಾವಲೋಕನ | ಕನ್ನಡ |
| ಶ್ರೀಮತ್‌ಭಾಗವತ (7ನೇಸ್ಕಂಧ) | ಕನ್ನಡ |
| ಭೈರವಪುರಾಣಂ | ಕನ್ನಡ |
| ಹರಿಭಜನಪದ್ಧತಿ | ಕನ್ನಡ |
| ವೇಮನ ವೇದಾಂತಸಿದ್ಧಾಂತ | ಕನ್ನಡ |
| ಹರಿಭಜನಾಮೃತಸಾರ | ಕನ್ನಡ |
| ಥಾಟ್ ಆಫ್ ಆಮ್ನಿಸೆನ್ಸ್ | ಆಂಗ್ಲ |
| ರುದ್ರನಮುಕಮ್ | ಆಂಗ್ಲ |
| ವಾಲ್ಮೀಕಿ ರಾಮಾಯಣ–ಅಯೋಧ್ಯಾ ಕಾಂಡ | ಆಂಗ್ಲ |
| ಮಹಾಭಾರತ ಅಂಡ್ ವೇರಿಯೇಷನ್ಸ್ | ಆಂಗ್ಲ |
| ಶ್ರೀರಾಘವೇಂದ್ರ ಲೈಫ್ ಅಂಡ್ ಹಿಸ್ ವರ್ಕ್ಸ್ | ಆಂಗ್ಲ |
| ತಿರುವಾಯ್ಮೊಳಿ | ಆಂಗ್ಲ |

| ಪುಸ್ತಕದ ಹೆಸರು | ಭಾಷೆ |
|---|---|
| ಸ್ತೋತ್ರರತ್ನಂ | ಆಂಗ್ಲ |
| ಕ್ರೈಸ್ಟ್ ಎಟರ್ನಲ್ | ಆಂಗ್ಲ |
| ಹಿಸ್ಟರಿ ಆಫ್ ತಿರುಮಲ ತಿರುಪತಿ ಟೆಂಪಲ್ ಆಫ್ ಶ್ರೀವೆಂಕಟೇಶ್ವರ | ಆಂಗ್ಲ |
| ಸೀಕ್ರೆಟ್ ತಪಸ್ | ಆಂಗ್ಲ |
| ಹಟರತ್ನಾವಳಿ | ಆಂಗ್ಲ |
| ದ್ವೈತ ಸಿದ್ಧಾಂತ ಸಾರ | ಆಂಗ್ಲ |
| ಅರಣ್ಯಕಾಂಡ ಅಂಡ್ ಕಿಷ್ಕಿಂಧಾಕಾಂಡ | ಆಂಗ್ಲ |
| ರಾಮದಾಸ್ ಆಫ್ ಭದ್ರಾಚಲಂ * | ಆಂಗ್ಲ |
| ಶ್ರೀವೇದಾಂತ ದೇಶಿಕ ದಯಾಶತಕಂ | ಆಂಗ್ಲ |
| ಲೇಪಾಕ್ಷಿ ಟೆಂಪಲ್ | ಆಂಗ್ಲ |
| ಸಹಸ್ರ ಮಂತ್ರಸಾರ ಸಂಗ್ರಹ ಸಂ|| 1,2, | ಸಂಸ್ಕೃತ |
| ವಾಗ್ವಜ್ರ * | ಸಂಸ್ಕೃತ |
| ಪೋತನ ಕೆ ಕರ್ಮ ಔರ್ ಭಕ್ತಿತತ್ತ್ವ | ಹಿಂದಿ |

* ಈ ಪುಸ್ತಕಗಳು ಪ್ರಕಟವಾಗಿವೆ.

(12ನೇ ಪುಟದಿಂದ)

ಳ್ಳದು. ಇದರ ವಿಷಯಕವಾದ ಕಥೆ ಹೀಗಿದೆ. ಸೃಷ್ಟಿಕರ್ತನಾದ ಬ್ರಹ್ಮನು ಒಂದುಸಲ ಕಾಂಚೀಪುರದಲ್ಲಿ ಅಶ್ವಮೇಧಯಾಗ ಮಾಡಲು ಪ್ರಾರಂಭಿಸಿದನು. ಅವನೊಡನೆ ಸಹಕರಿಸದ ಅವನ ಮಹಿಷಿಯಾದ ಸರಸ್ವತಿಯು ಅವನ ಯಜ್ಞವನ್ನು ನಾಶಪಡಿಸಲು ವೇಗಾನದಿಯ ರೂಪದಲ್ಲಿ ಹರಿದು ಬಂದಳು. ಯಥೋಕ್ತಕಾರಿಯಾದ ವಿಷ್ಣುವು ನದಿಗೆ ಅಡ್ಡಲಾಗಿ ಸೇತುವಾಗಿ ನಿಂತು ಯಜ್ಞ ಪೂರ್ತಿಮಾಡಿದನು. ಇದಕ್ಕೆ ಬೇರೊಂದು ಅರ್ಥವೂ ಉಂಟು. ನಿರರ್ಗಳವಾಗಿ ಹರಿಯುವ ಸರಸ್ವತಿ ರೂಪವಾದ ಅವರ ವಾಗ್ಝರಿಯು ಅವರು ವಿಷ್ಣುವನ್ನು ನೆನೆದ ತಕ್ಷಣ ಸ್ತಬ್ಧವಾಗುವುದು. ಅವರ ವಾಕ್ಕಿಗೆ ವಿಷ್ಣುವು ಸೇತುವಾಗುತ್ತಾನೆ. ರಾಜಗೋಪಾಲಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಶಿನ್ನಾಮು ರಂಗನಾಥಾಚಾರ್ಯರ ತಮಿಳು ವ್ಯಾಖ್ಯಾನವೂ ಇವೆ.

## ಅಷ್ಟಭುಜಾಷ್ಟಕಂ

ಇದು ಅಷ್ಟಭುಜಗಳಿಂದಲಂಕೃತವಾದ ಕಂಚಿಯ ಗಜೇಂದ್ರವರದನ ವಿಷಯಕವಾದ ಸ್ತೋತ್ರ. ೧೦ ಶ್ಲೋಕಗಳನ್ನುಳ್ಳದು. ಆದಿಕಾಲದಲ್ಲಿ ರಚಿತವಾಗಿದ್ದಿರಬೇಕು. ಇದಕ್ಕೆ ಎ. ಆರ್. ಶೇಷಾದ್ರಿ ಆಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಅಗ್ನಿಹೋತ್ರಂ ಚಕ್ರಪಾಣಿ ಪಾಟ್ರಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇವೆ.

## ಕಾಮಾಸಿಕಾಷ್ಟಕಮ್

ಕಂಚಿಯಲ್ಲಿರುವ ಕಾಮಾಸಿಕನರಸಿಂಹನ ವಿಷಯಕವಾದ ಒಂಬತ್ತು ಶ್ಲೋಕಗಳು. ಇಲ್ಲಿನ 'ತ್ವಯಿ ರಕ್ಷತಿ ರಕ್ಷಕೈಃ ಕಿಮನ್ಯೈಃ ತ್ವಯಿಚಾರಕ್ಷತಿ ರಕ್ಷಕೈಃ ಕಿಮನ್ಯೈಃ। ಇತಿ ನಿಶ್ಚಿತ ಧೀಃ ಶ್ರಯಾಮಿ ನಿತ್ಯಂ ನೃಹರೇ ವೇಗವತೀ ತಟಾಶ್ರಯಂ ತ್ವಾ' ಎಂಬ ಶ್ಲೋಕದಲ್ಲಿ ವ್ಯಕ್ತಪಡಿಸಿರುವ ಅನನ್ಯ ಶರಣತ್ವವು ಅದ್ಭುತವಾಗಿದೆ.

## ಪರಮಾರ್ಥಸ್ತುತಿ

ಇದು ಕಂಚಿಗೆ ಏಳುಮೈಲಿ ದೂರದಲ್ಲಿರುವ ತಿರುಪ್ಪುಕುರಿಯ ವಿಜಯ ರಾಘವ ಅಥವಾ ಸಮರಪುಂಗವರ ವಿಷಯಕವಾದ ಸ್ತೋತ್ರ. ಇದಕ್ಕೆ ಎ. ಆರ್. ಶೇಷಾದ್ರಿ ಆಚಾರ್ಯರ ಸಂಸ್ಕೃತ ವಾಖ್ಯಾನವೂ ಅಗ್ನಿಹೋತ್ರಂ ಚಕ್ರಪಾಣಿ ಪಾಟ್ರಾಚಾರ್ಯರ ತಮಿಳು ವ್ಯಾಖ್ಯಾನವೂ ಎನ್. ಎಸ್. ಅನಂತರಂಗಾಚಾರ್ಯರ ಕನ್ನಡ ವ್ಯಾಖ್ಯಾನವೂ ಇವೆ. ಇದಕ್ಕೆ 'ಸಮರಪುಂಗದ ಸ್ತುತಿ' ಅಥವಾ 'ವಿಜಯ ರಾಘವ ಸ್ತುತಿ' ಎಂಬ ಹೆಸರುಗಳೂ ಉಂಟು.

## ಶರಣಾಗತಿದೀಪಿಕಾ

ಇದು ದೀಪಪ್ರಕಾಶರನ್ನು ಕುರಿತ ಸ್ತೋತ್ರ. ಕಾಂಚೀಪುರದಲ್ಲಿ ರಚಿತವಾದುದು, ರಾಮಾನುಜ ದರ್ಶನ ಮತ್ತು ಸಂಪ್ರದಾಯಗಳನ್ನು ವಿವರಿಸುತ್ತದೆ. ಆಚಾರ್ಯರ ಸ್ವವಿಷಯಗಳ ಸೂಚನೆಯೂ ಇದೆ. ಆಳ್ವಾರ್ರುಗಳ ದಿವ್ಯಪ್ರಭಾವಗಳ ಪ್ರಭಾವದಿಂದ ಪೂರ್ಣವಾಗಿದೆ. ಆಚಾರ್ಯ ನಿಷ್ಠೆಯ ಪರಾಕಾಷ್ಠೆಯನ್ನು ಪ್ರತಿಪಾದಿಸುತ್ತದೆ. ಆಚಾರ್ಯರೇ ಸೂಚಿಸಿರುವಂತೆ ಭಗವಂತನ ಗುಣಾನಂದವನ್ನೂ ಪ್ರದರ್ಶಿಸತಕ್ಕ ಉಚ್ಚಸ್ತೋತ್ರ. ವಿವಿಧ ಭಾವಪೂರ್ಣವಾದ ೬೦ ಶ್ಲೋಕಗಳನ್ನುಳ್ಳದು. ಆಚಾರ್ಯರ ಮೂರ್ತಿದರ್ಶನದಿಂದ ಬ್ರಹ್ಮಾನಂದಾನುಭವದವರೆಗಿನ ವಿವಿಧ ಸೋಪಾನಗಳನ್ನು ನಿರೂಪಣ ಮಾಡತಕ್ಕದ್ದಾಗಿದೆ. ಇದಕ್ಕೆ ಶ್ರೀಶೈಲ ತಿರುಮಲೈನಂಬಿ ರಾಘವಾಚಾರ್ಯ ಮತ್ತು ಗಾರ್ಗ್ಯ ವೆಂಕಟಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಕೆ. ಎಂ. ರಾಜಗೋಪಾಲಾಚಾರ್ಯ ಮತ್ತು ವರದಾಚಾರ್ಯರ ತಮಿಳು ವ್ಯಾಖ್ಯಾನಗಳೂ ಎನ್. ಎಸ್. ಅನಂತರಂಗಾಚಾರ್ಯರ ಕನ್ನಡ ವ್ಯಾಖ್ಯಾನವೂ ಇವೆ.

## ದೇವನಾಯಕ ಪಂಚಾಶತ್

ಇದು ತಿರುವಹೀಂದ್ರಪುರದ ದೇವನಾಯಕನನ್ನು ಕುರಿತ ಸ್ತೋತ್ರ. ೫೩ ಶ್ಲೋಕಗಳಲ್ಲಿ ೫೦ ವಸಂತತಿಲಕವೃತ್ತಗಳಾಗಿವೆ. ನಮ್ಮಾಳ್ವಾರ್ರ ಅನೇಕ ಅಭಿಪ್ರಾಯಗಳ ಅನುವಾದಗಳಿವೆ. ಅರ್ಚಾ ಮತ್ತು ವಿಗ್ರಹಧ್ಯಾನದ ಪರಮ ಸೌಂದರ್ಯದಿಂದ ಕೂಡಿದೆ. ರಾಘವಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ರಾಜಗೋಪಾಲಾಚಾರ್ಯರ ತಮಿಳು ವ್ಯಾಖ್ಯಾನವೂ ಇವೆ.

## ಅಚ್ಯುತಶತಕ

ದೇವನಾಯಕನಿಗೆ ಅರ್ಪಿಸಿದ ೧೦೧ ಪ್ರಾಕೃತ ಗಾಹೆಗಳು. ತಿರುವಹೀಂದ್ರಪುರದಲ್ಲಿ ರಚಿತವಾದುದು. ದೇಶಿಕವರ್ಯರು 'ಭಕ್ತಿಃ ಶೃಂಗಾರರೀತ್ಯಾ ಪರಿಣಮಿತಿ' ಎಂಬ ಉಕ್ತಿಯ ಪ್ರಕಾರ ಭಕ್ತಿ ಶೃಂಗಾರವನ್ನು ಅನುಭವಿಸಿ ಶ್ರೀ ಶಠಗೋಪರ ಹಾಗೆ ತಾವೂ ಭಗವದತ್ಯಂತ ಪರತಂತ್ರರಾಗಿ ತಮ್ಮನ್ನು ನಾಯಿಕೆಯನ್ನಾಗಿ ಭಾವಿಸಿಕೊಂಡು ಭಗವಂತನನ್ನು ಸ್ವಾನುಭವ ವಿಷಯಭೂತನಾದ ಕಾಂತನನ್ನಾಗಿ ಸಂಭಾವಿಸಿ ಸ್ತ್ರೀಯರಿಗೆ, ಅದರಲ್ಲಿಯೂ ಮುಗ್ಧೆಯರಿಗೆ ಸಮುಚಿತವಾದ ಪ್ರಾಕೃತ ಭಾಷೆಯಿಂದ ಭಗವಂತನನ್ನು ತಮ್ಮ ಇಷ್ಟಾರ್ಥ

# ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಪ್ರೆಸ್‌ಕಾಂಪೌಂಡ್
ತಿರುಪತಿ–517501

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

# ವಿವಿಧ ಆರ್ಜಿತ ಉತ್ಸವಗಳ ಪರಿಷ್ಕೃತ ದರಗಳ ವಿವರಣೆ

### 1. ದರ್ಶನಗಳು

| | | |
|---|---|---|
| 1 | ಸ್ಪೆಷಲ್ ದರ್ಶನ | ರೂ. 25 |

### 2. ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ | ರೂ. 200 |
| 2. | ಅಭಿಷೇಕ (ಪುಲಿಕಾಪುಸೇವ) | ರೂ. 500 |
| 3. | ಗಂಬುರಗಿನ್ನೆ | ರೂ. 300 |
| 4. | ಪುನುಗುಗಿನ್ನೆ | ರೂ. 200 |
| 5. | ಜಾಫ್ರಾಗಿನ್ನೆ | ರೂ. 100 |
| 6. | ಕಸ್ತೂರಿಗಿನ್ನೆ | ರೂ. 100 |
| 7. | ಸಹಸ್ರಕಲಶಾಭಿಷೇಕ | ರೂ. 2500 |
| 8. | ತಿರುಪ್ಪಾವಡ | ರೂ. 5000 |
| 9. | ಕೋವಿಲ್ ಆಳ್ವಾರು ತಿರುಮಂಜನ | ರೂ. 1745 |
| 10. | ಐನಾ ಮಹಲಿನಲ್ಲಿನ ಡೋಲೋತ್ಸವ | ರೂ. 1000 |

### 3. ಉತ್ಸವಗಳು

| | | |
|---|---|---|
| 1. | ವಸಂತೋತ್ಸವ | ರೂ. 2500 |
| 2. | ಕಲ್ಯಾಣೋತ್ಸವ | ರೂ. 1500 |
| 3. | ಬ್ರಹ್ಮೋತ್ಸವ | ರೂ. 750 |

### 4. ವಾಹನಗಳು

1. ಸರ್ವಭೂಪಾಲವಾಹನ-ವಜ್ರಕವಚಸೇವೆ
   ಬಂಗಾರದ ಗರುಡ, ಕಲ್ಪವೃಕ್ಷ, ದೊಡ್ಡ ಶೇಷ
   ಸರ್ವಭೂಪಾಲ ಸೂರ್ಯಪ್ರಭ-ಒಂದೊಂದು ವಾಹನ
   ರೂ. 125
2. ಬೆಳ್ಳಿಯಗರುಡ, ಚಿಕ್ಕಶೇಷ, ಚಂದ್ರಪ್ರಭೆ,
   ಆನೆ, ಕುದುರೆ, ಹಂಸ, ಹನುಮಂತ
   ಒಂದೊಂದು ವಾಹನ ಸೇವೆ
   ರೂ. 100

ಮೂವರಿಗೆ ಮಾತ್ರ ಪ್ರವೇಶ.

### 5. ಅನ್ನಪ್ರಸಾದಗಳು (ಕಾಲಸೋಲ)

| | | |
|---|---|---|
| 1. | ದಧ್ಯೋದನ | ರೂ. 75 |
| 2. | ಪುಲಿಯೋಗರೆ (ಚಿತ್ರಾನ್ನ) | ರೂ. 75 |
| 3. | ಪೊಂಗಲ್ | ರೂ. 100 |
| 4. | ಸಕ್ಕರೆ ಪೊಂಗಲ್ | ರೂ. 100 |
| 5. | ಸಾಕರಬಾತ್ | ರೂ. 125 |
| 6. | ಕೇಸರಿಬಾತ್ | ರೂ. 125 |
| 7. | ಪಾಯಸ | ರೂ. 125 |
| 8. | ಶೀರಾ | ರೂ. 200 |

### 6 ಪಣ್ಯ ಪ್ರಸಾದಗಳು

| | | |
|---|---|---|
| 1. | ಅಪ್ಪವು | ರೂ. 250 |
| 2. | ಲಾಡು | ರೂ. 600 |
| 3. | ವಡೆ | ರೂ. 350 |
| 4. | ಹೋಳಿ | ರೂ. 250 |
| 5. | ದೋಸೆ | ರೂ. 250 |
| 6. | ತೇನೆತೊಳ | ರೂ. 250 |
| 7. | ಸುಖಿಯವು | ರೂ. 250 |
| 8. | ಜಿಲೇಬಿ | ರೂ. 600 |

### 7. ನಿತ್ಯ ಸೇವೆಗಳು

| | | |
|---|---|---|
| 1. | ಕರ್ಪೂರ ಆರತಿ | ರೂ. 150 |
| 2. | ನವನೀತ ಆರತಿ | ರೂ. 400 |
| 3. | ಅರ್ಚನೆ | ರೂ. 200 |
| 1) | ಶಾಶ್ವತ ನಿತ್ಯ ಕರ್ಪೂರ ಆರತಿ | ರೂ. 3000 |
| 2) | ಶಾಶ್ವತ ನಿತ್ಯ ನವನೀತ ಆರತಿ | ರೂ. 8000 |
| 3) | ಶಾಶ್ವತ ನಿತ್ಯ ಅರ್ಚನೆ | ರೂ. 4000 |

ಷರಾ :— (1) ಸಹಸ್ರ ಕಲಶಾಭಿಷೇಕ ಪ್ರತಿ ಬುಧವಾರ, ತಿರುಪ್ಪಾವಡ ಪ್ರತಿ ಗುರುವಾರ ಜರುಗುವುವು.

(2) ಆಮಂತ್ರಣೋತ್ಸವಕ್ಕೆ ಐವರಿಗೆ ಬದಲಾಗಿ ಇಬ್ಬರೇ ಅನುಮತಿಸಲ್ಪಡುವರು.

(3) ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್ ಸೇವೆ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ್ನ 1 ಗಂಟೆ ರಾತ್ರಿ 8 ಗಂಟೆ ನಡುವೆ ಜರುಗುವುವು.

(4) ಪ್ರತ್ಯೇಕ ದರ್ಶನದ ಟಿಕೆಟ್ಟಿನವರನ್ನು ಹಿಂದಿನಂತೆ ಧ್ವಜಸ್ತಂಭದ ಹತ್ತಿರವಲ್ಲದೆ ಮಹಾದ್ವಾರದ ಹತ್ತಿರ ಸರತಿಯ ಸಾಲಿನಲ್ಲಿ ಡುವರು.

**ಕಾರ್ಯನಿರ್ವಹಣಾಧಿಕಾರಿ,**
ತಿರುಮಲ ತಿರುಪತಿ ದೇವಸ್ಥಾನ
ತಿರುಪತಿ–517 501

ಪ್ರಾಪ್ತಿಗಾಗಿ ಪ್ರಾರ್ಥಿಸುತ್ತಾರೆ. ಇದನ್ನು ದಿವಂಗತ ಮ.ಮ. ಶೇಟ್ಲೂರು ನರಸಿಂಹಾಚಾರ್ಯರು 'ರಾಮಾನುಜ ದರ್ಶನದ ಸಾರಸಂಗ್ರಹ' ವೆಂದು ಹೇಳಿದ್ದಾರೆ. ಆಚಾರ್ಯರ ದೃಷ್ಟಿಯಿಂದ ಪ್ರಾಕೃತವು ವಾಗ್ದೇವಿಯಾದ ಸರಸ್ವತಿಯ ಮಧುರವಾಣಿ. ಆದುದರಿಂದಲೇ ಅದನ್ನು ದೊಡ್ಡಯ್ಯಾಚಾರ್ಯರು ಅಮೋಘವಾದುದೆಂದಿದ್ದಾರೆ. ಇದಕ್ಕೆ ದೇಶಿಕರವರೇ ಅನುಗ್ರಹಿಸಿದ ಸಂಸ್ಕೃತ ಛಾಯೆಯೂ ಇದೆ. ಎನ್. ಆರ್. ತಾತಾಚಾರ್ಯ, ವಿ. ದೇಶಿಕಾಚಾರ್ಯ, ಕುಮಾರ ತಾತಾಚಾರ್ಯ ಇವರ ಸಂಸ್ಕೃತ ವ್ಯಾಖ್ಯಾನಗಳೂ ಶಿನ್ನಾಮು ರಂಗನಾಥಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇವೆ.

## ದೇಹಲೀಶಸ್ತುತಿ

ಇದು ತಿರುಕ್ಕೋವಲೂರಿನ ದೇಹಲೀಶಸ್ವಾಮಿಯ ವಿಷಯಕವಾದ ೨೮ ಶ್ಲೋಕಗಳು. ಆದಿಯ ಆಳ್ವಾರುಗಳಾದ ಪೊಯ್ಹೈ, ಪೂದತ್ತಾರ್ ಮತ್ತು ಪೇಯಾಳ್ವಾರ್ರುಗಳ ಉಕ್ತಿಗಳ ಛಾಯೆಯಿಂದ ಕೂಡಿದೆ. ಇದರಲ್ಲಿ ಮುನಿತ್ರಯ ಸಂಪ್ರದಾಯದ ಇತಿಹಾಸ ಸೂಚಿತವಾಗಿದೆ. ಈ ಕವಿತೆಯ ವಿಷಯದಲ್ಲಿ ಆಚಾರ್ಯರಿಗೆ ಪರಮಪ್ರೇಮ. ಎನ್. ಆರ್. ತಾತಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಶಿನ್ನಾಮು ರಂಗನಾಥಾಚಾರ್ಯ ಮತ್ತು ಪಿ. ಟಿ. ಲಕ್ಷ್ಮೀನರಸಿಂಹಾಚಾರ್ಯರ ದ್ರಾವಿಡ ವ್ಯಾಖ್ಯಾನಗಳೂ ಇವೆ.

## ನ್ಯಾಸತಿಲಕಂ

ಶ್ರೀರಂಗದ ರಂಗನಾಥನನ್ನು ಕುರಿತ ೩೨ ಶ್ಲೋಕಗಳು, ನ್ಯಾಸವಿಷಯಕವಾದುದು. ನಯನಾಚಾರ್ಯ ಸಂಸ್ಕೃತ ವ್ಯಾಖ್ಯಾನವೂ ಶ್ರೀಭಾಷ್ಯಂ ಶ್ರೀನಿವಾಸಾಚಾರ್ಯ ಮತ್ತು ಕುರುಚಿ ಗೋಪಾಲಾಚಾರ್ಯರ ದ್ರಾವಿಡ ವ್ಯಾಖ್ಯಾನಗಳೂ ಇವೆ.

## ರಘುವೀರಗದ್ಯಂ

ಇದು ರಾಮಾಯಣದ ಸಾರಸಂಗ್ರಹ. ಶ್ರೀ ರಾಮಾನುಜರ ಶ್ರೀರಂಗಗದ್ಯದ ಮಾದರಿಯಲ್ಲಿದೆ. ಬಹುಶಃ ಅದೇ ಇದಕ್ಕೆ ಪ್ರೇರಕವಿರಬೇಕು. ಬಹುನಾದಮಯವಾಗಿದೆ. ತಿರುವಹೀಂದ್ರಪುರದ ಬ್ರಹ್ಮೋತ್ಸವದ ಸಮಯದಲ್ಲಿ ಇದನ್ನು ಪಾರಾಯಣಮಾಡುತ್ತಾರೆ. ಇದರ ವಿಷಯವಾಗಿ ಆಚಾರ್ಯರೇ 'ಕಠೋರ ಸುಕುಮಾರ ಗುಂಭ ಗಂಭೀರಂ, ಭವಭಯ ಭೇಷಜಂ' ಎಂದಿದ್ದಾರೆ. ಇದು ಮಹಾವೀರ ವೈಭವಂ. ತೆನ್‌ಪರೈ ರಾಜಗೋಪಾಲಾಚಾರ್ಯ, ಭಾರದ್ವಾಜಂ ಶ್ರೀನಿವಾಸಾಚಾರ್ಯರ ಸಂಸ್ಕೃತ ವ್ಯಾಖ್ಯಾನಗಳು ಸೋಸಲೆ ಶ್ರೀನಿವಾಸ ಚಕ್ರವರ್ತಿಗಳು ಮತ್ತು ಶಿನ್ನಾಮು ರಂಗನಾಥಾಚಾರ್ಯರ ದ್ರಾವಿಡ ವ್ಯಾಖ್ಯಾನಗಳೂ ಶ್ರೀಸೂಕ್ತಿ ಸಂರಕ್ಷಣೆಯ 'ರಘುವೀರಗದ್ಯ ಸಾರ'ವೂ ಇದರ ಶ್ರೇಷ್ಠತೆಯನ್ನು ವಿಶದಪಡಿಸತಕ್ಕವಾಗಿವೆ. ಎನ್. ಎಸ್. ಅನಂತ ರಂಗಾಚಾರ್ಯರ ಕನ್ನಡ ವ್ಯಾಖ್ಯಾನವೂ ಈಚೆಗೆ ಪ್ರಕಟವಾಗಿದೆ.

## ಭೂಸ್ತುತಿ

ಭೂದೇವಿಯ ವಿಷಯಕವಾದ 32 ಶ್ಲೋಕಗಳು. ಮಹಾ ಬಲಿಪುರದ ಪಕ್ಕದಲ್ಲಿರುವ ಇಡುವೈದ್ಯ ವರಾಹಸ್ವಾಮಿಯ ದೇವಾಲಯದಲ್ಲಿ ರಚಿತವಾಗಿರಬೇಕು. ಇದು ಭಾರತವರ್ಷದ ಪರಮ ವೈಭವ ವರ್ಣನೆಯಾಗಿದೆ. ರಾಘವಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ರಾಜಗೋಪಾಲಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇವೆ.

## ಗರುಡದಂಡಕಮ್

ಗರುಡನನ್ನು ಕುರಿತ ದಂಡಕ ಛಂದಸ್ಸಿನ ಸ್ತೋತ್ರ ೧೧೮ ಮಾತ್ರೆಗಳ ೪ ಪಾದಗಳಾಗಿ ವಿಭಾಗವಾಗಿದೆ. ಆದಿಯಲ್ಲಿ ಎರಡು ಸಗಣಗಳು ಬಹು ನಾದಮಯವಾಗಿವೆ. ಇದರಿಂದ ಗರುಡನನ್ನು ಪ್ರತ್ಯಕ್ಷೀಕರಿಸಿ ಸ್ಪರ್ಧೆಗಾಗಿ ಬಂದ ಹಾವಾಡಿಗನನ್ನು ಸೋಲಿಸಿದರೆಂದು ಪ್ರತೀತಿ. 'ಸಂಕಲ್ಪಸೂರ್ಯೋದಯ'ದ ಹತ್ತನೆಯ ಅಂಕದಲ್ಲಿ ಇದು ಸಂಪೂರ್ಣವಾಗಿ ಅನುವದಿತವಾಗಿದೆ. ತೆಪ್ಪರೈ ರಾಜಗೋಪಾಲಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಕೆ. ಎಂ. ರಾಜಗೋಪಾಲಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇವೆ.

## ಗರುಡಪಂಚಾಶತ್

ಗರುಡನ ವಿಷಯಕವಾದ ೫೨ ಸ್ರಗ್ಧರಾವೃತ್ತಗಳು. ತಿರುವಹಿಂದ್ರಪುರದಲ್ಲಿ ಬ್ರಹ್ಮೋತ್ಸವಕಾಲದಲ್ಲಿ ಪಠಿತವಾಗುತ್ತದೆ. ಇದು ಗರುಡ ಮಂತ್ರ ಸಾರವೆಂದು, ಪರಿಗಣಿತವಾಗಿದೆ. ಇದರ ಕೆಲವು ಶ್ಲೋಕಗಳು 'ಸಂಕಲ್ಪಸೂರ್ಯೋದಯ'ದ ಹತ್ತನೆಯ ಅಂಕದಲ್ಲಿ ಉದಹೃತವಾಗಿವೆ. ಶ್ರೀ ಭಾಷ್ಯಂ, ಶ್ರೀನಿವಾಸಾಚಾರ್ಯರ ಸಂಸ್ಕೃತಪದವಿವೃತಿಯೂ ಶಿನ್ನಾಮು ಶ್ರೀನಿವಾಸಾಚಾರ್ಯ ಮತ್ತು ರಾಮಾನುಜಾಚಾರ್ಯರ ದ್ರಾವಿಡ ವ್ಯಾಖ್ಯಾನಗಳೂ ಇವೆ.

## ಯತಿರಾಜ ಸಪ್ತತಿ

ಶ್ರೀಮದ್ರಾಮಾನುಜರ ವಿಷಯಕವಾದ ೭೪ ಶ್ಲೋಕಗಳು. ಶ್ರೀ ಪೆರಂಬೂದೂರಿನಲ್ಲಿ ರಚಿತವಾದುದು. ಇದರಲ್ಲಿ ಆಚಾರ್ಯಭಕ್ತಿ ಅನ್ಯಾದೃಶವಾಗಿ ಪ್ರದರ್ಶಿತವಾಗಿದೆ. ಇದರ ಅನೇಕ ಶ್ಲೋಕಗಳು ಆಚಾರ್ಯರ ಇತರ ಗ್ರಂಥಗಳಲ್ಲಿಯೂ ಅನುವಾದಿತವಾಗಿವೆ. ಇದು ಕವಿಗೆ ಪರಮಪ್ರಿಯವಾದ ಸ್ತೋತ್ರ. ಇದಕ್ಕೆ ಕರ್ತೃನಿರ್ದೇಶವಿಲ್ಲದ ಎರಡು ವ್ಯಾಖ್ಯಾನಗಳ ಜೊತೆಗೆ ಕೌಂಡಿನ್ಯಂ ಶ್ರೀನಿವಾಸಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಶಿನ್ನಾಮು ರಂಗಾನಾಥಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಎನ್. ಎಸ್. ಅನಂತರಂಗಾಚಾರ್ಯರ ಕನ್ನಡ ವ್ಯಾಖ್ಯಾನವೂ ಇವೆ.

## ದಯಾಶತಕಮ್

ಶ್ರೀನಿವಾಸನನ್ನು ಕುರಿತ ಭಾವನಾಮಯವಾದ ಸೊಗಸಾದ ಗೀತೆ. ಭಗವಂತನ ದಯೆ ಮತ್ತು ಸರ್ವಶಕ್ತಿತ್ವದ ಎಲ್ಲ ಮುಖವನ್ನೂ ಕುರಿತದ್ದಾಗಿದೆ. ಇದನ್ನು ದ್ವಯಮಂತ್ರದ ವಿವರಣೆಯೆಂದು ವೈದಿಕಸಾರ್ವಭೌಮರು ಪರಿಗಣಿಸುತ್ತಾರೆ. ಇಲ್ಲಿ ದಯೆಯ ವಿವಿಧ ರೂಪಗಳಿವೆ. ಅನುಗುಣವಾಗಿ ವಿವಿಧ ಛಂದಸ್ಸಿನ ೧೦೮ ಶ್ಲೋಕಗಳಿವೆ. ಪ್ರಥಮ ವರ್ಗದ ಭಾವಗೀತೆಯೆಂಬುದರಲ್ಲಿ ಸಂದೇಹವಿಲ್ಲ. ಇದು ಆಚಾರ್ಯರ ಭಾವೀ ಕವಿತಾಶಕ್ತಿಯ ಮೂಲರೂಪವನ್ನು ಸೊಗಸಾಗಿ ಪ್ರದರ್ಶಿಸುತ್ತದೆ. ಇದಕ್ಕೆ ಆತ್ರೇಯ ವೆಂಕಟಾಚಾರ್ಯ, ವಾಧೂಲ ಶ್ರೀನಿವಾಸಾಚಾರ್ಯ, ವಾತ್ಸರಾಮಾನುಜಾಚಾರ್ಯ ಇವರ ಸಂಸ್ಕೃತ ವ್ಯಾಖ್ಯಾನಗಳು ತಿರುವಹೀಂದ್ರಪುರದ ದೇವನಾಥಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇವೆ.

## ಗೋದಾ ಸ್ತುತಿ

ಆಂಡಾಳ್ ವಿಷಯಕವಾದ ೨೯ ಶ್ಲೋಕಗಳು. ಇದರ ಮಧುರಭಾವಪ್ರವಾಹದಲ್ಲಿ ವಾಚಕನು ಮುಳುಗಿಹೋಗುತ್ತಾನೆ. ಆಂಡಾಳ್ ಅವರ ದ್ರಾವಿಡ ಗೀತೆಗಳ ಮಾಧುರ್ಯಸಾರವನ್ನೆಲ್ಲ ಇದರಲ್ಲಿ ಭಟ್ಟೀ ಇಳಿಸಿದ್ದಾರೆ. ಶ್ರೀಶೈಲ ರಾಮಾನುಜಾಚಾರ್ಯರ ಸಂಸ್ಕೃತ ಮತ್ತು ರಾಜಗೋಪಾಲಾಚಾರ್ಯರ ದ್ರಾವಿಡ ವ್ಯಾಖ್ಯಾನಗಳಿವೆ – ನೀಳಾದೇವಿಯನ್ನುಕುರಿತ ಇದೇ ಮಾದರಿಯದು 'ನೀಳಾಸ್ತುತಿ'.

## ನ್ಯಾಸದಶಕಂ

ಪ್ರಪತ್ತಿ ವಿಷಯಕವಾದ ೧೦ ಅನುಷ್ಟುಪ್ ಶ್ಲೋಕಗಳು ವರದರಾಜರ ಪ್ರಾರ್ಥನೆಯಿರುವುದರಿಂದ ಕಂಚಿಯಲ್ಲಿ ರಚಿತವಾಗಿರಬೇಕು. ಸರಳವೂ ಸುಲಭವೂ ಆಗಿದೆ. ಬಾಲ್ಯದಲ್ಲಿ ರಚಿತವಾದಾದ್ದರೂ ಆಚಾರ್ಯರ ಮುಂದಿನ ಮಹತ್ವವನ್ನು ಸೂಚಿಸತಕ್ಕದ್ದಾಗಿದೆ. ಇದರಲ್ಲಿ ಬರುವ —

ಮಾಂ ಮದೀಯಂಚನಖಿಲಂ ಚೇತನಾ-
ಚೇತನಾತ್ಮಕಂ
ಸ್ವಕೈಂಕರ್ಯೋಪಕರಣಂ ವರದ ಸ್ವೀಕುರು
ಸ್ವಯಂ ॥

ಎಂಬ ಶ್ಲೋಕವು ಬಹು ಆಕರ್ಷಕವಾಗಿದೆ. ದೇಶಿಕದರ್ಶನ ಪ್ರಚಾರಕರಾದ ಮಹಾಚಾರ್ಯರು ಇದನ್ನು ವಿಶೇಷವಾಗಿ ಕೊಂಡಾಡಿದ್ದಾರೆ. ಇದಕ್ಕೆ ಶ್ರೀ ಭಾಷ್ಯಂ ಶ್ರೀನಿವಾಸಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ಕುರುಚಿ ಗೋಪಾಲಾಚಾರ್ಯರ ದ್ರಾವಿಡ ವ್ಯಾಖ್ಯಾನವೂ ಇವೆ.

## ನ್ಯಾಸವಿಂಶತಿ

ಇದು ಪ್ರಪತ್ತಿ ವಿಷಯಕವಾದ ಮತ್ತೊಂದು ಪದ್ಯಗ್ರಂಥ. ಸ್ರಗ್ಧರಾವೃತ್ತದಲ್ಲಿದೆ ; ಪ್ರಪತ್ತಿಯ ಪೂರ್ವಸಿದ್ಧತೆ, ಸ್ವರೂಪ, ಫಲಗಳನ್ನು ವಿವರಿಸುತ್ತದೆ. ಗುರು ಶಿಷ್ಯರ ಲಕ್ಷಣ, ಭಕ್ತಿ ಪ್ರಪತ್ತಿಗಳ ಆಧ್ಯಾತ್ಯ ಮೌಲ್ಯ, ಅವುಗಳೆರಡರ ತಾರತಮ್ಯ, ಔಪನಿಷದಿಕ ಸಾಧನೆಗಳಲ್ಲಿ ಪ್ರಪತ್ತಿಯ ಸ್ಥಾನ ಮೊದಲಾದವು ಇಲ್ಲಿ ಬಹುವಿಶದವಾಗಿ ವಿವೃತವಾಗಿವೆ. ಅಂತ್ಯದಲ್ಲಿ ಸ್ವಾನುಷ್ಠಾನರೂಪವಾದ ಎರಡು ಶ್ಲೋಕಗಳು ಉಪನಿಬದ್ಧವಾಗಿವೆ. ಒಟ್ಟು ೨೨ ಶ್ಲೋಕಗಳಿವೆ. ಅಲ್ಲದೆ ಇದು ಯಾಮುನ ರಾಮಾನುಜರ ಪ್ರಪತ್ತಿ ಶಾಸ್ತ್ರದ ಸಂಗ್ರಹವೇ ಆಗಿವೆ. ಇದಕ್ಕೆ ವೇದಾಂತದೇಶಿಕರಿಂದಲೇ ರಚಿತವಾದ ಒಂದು ಸಂಗ್ರಹ ವ್ಯಾಖ್ಯಾನವಿದೆ. ಶಿಷ್ಯರ ಪ್ರಾರ್ಥನೆಯ ಮೇಲೆ ದೇಶಿಕರು ಇದನ್ನು ಅನುಗ್ರಹಿಸಿದರೆಂದು ಪ್ರತೀತಿ. ಇದಕ್ಕೆ ಶ್ರೀನಿವಾಸಾಚಾರ್ಯರ ಸಂಸ್ಕೃತ ವ್ಯಾಖ್ಯಾನವೂ ನಡಾದೂರು ವೆಂಕಟರಮಣಾಚಾರ್ಯರ ಮಣಿಪ್ರವಾಳ ವ್ಯಾಖ್ಯನವೂ ಇವೆ.

## ವೈರಾಗ್ಯ ಪಂಚಕಮ್

ಇದು ವಿಜಯನಗರ ಸಂಸ್ಥಾನದ ಆಹ್ವಾನಕ್ಕೆ ಪ್ರತಿಯಾಗಿ ಬರೆದು ಕಳುಹಿಸಿದ ಐದು ಶ್ಲೋಕಗಳೆಂದು ಸಂಪ್ರದಾಯಾಭಿಪ್ರಾಯ. ಭೌತಿಕ ವಿಷಯದಲ್ಲಿ ಆಚಾರ್ಯರಿಗಿದ್ದ ನಿಸ್ಪೃಹತೆಯೂ ಭಗವದರ್ಪಣದಲ್ಲಿದ್ದ ಸಂಪೂರ್ಣವಿಶ್ವಾಸವೂ ಪ್ರಕಟಿತವಾಗಿದೆ. ಇದರ

ನಾಸ್ತಿ ಪಿತ್ರಾರ್ಜಿತಂ ಕಿಂಚಿತ್ ನ ಮಯಾ
ಕಿಂಚಿದಾರ್ಜಿತಂ ।
ಅಸ್ತಿ ಮೇ ಹಸ್ತಿಶೈಲಾಗ್ರೇ ವಸ್ತು ಪೈತಾ-
ಮಹಂಧನಂ ॥

ಎಂಬ ಶ್ಲೋಕವು ಸಂಭಾವ್ಯವಾಗಿದೆ.

## ಹರಿದಿನ ತಿಲಕ, ಆರಾಧನಾಕಾರಿಕಾ ಯಜ್ಞೋಪವೀತ ಪ್ರತಿಷ್ಠೆ

ಇವೂ ದೇಶಿಕಕೃತಗಳೆಂದು ಅಂಗೀಕೃತವಾಗಿವೆ ; ಮೊದಲನೆಯದು ಏಕಾದಶ ವ್ರತ ಮಾಹಾತ್ಮ್ಯವನ್ನು ತಿಳಿಸುವ ೧೭ ಸ್ರಗ್ಧರಾವೃತ್ತಗಳು ಏಕತೃತವೆಂದು ಸಾಧಿಸುವುದಕ್ಕೆ ಗ್ರಂಥದಲ್ಲಿ ಯಾವ ಆಧಾರಗಳಿಲ್ಲದಿದ್ದರೂ ಶೈಲಿ ಮತ್ತು ವಿಷಯವಿರಳಪಣಾರೀತಿ ಮೊದಲಾದುವುಗಳಿಂದ ಅವರದೆಂದು ಅಂಗೀಕೃತವಾಗಿದೆ. ಎರಡನೆಯದು ಯಜ್ಞೋಪವೀತ ಪ್ರತಿಷ್ಠಾಕ್ರಮವನ್ನು ಆ ಮಂತ್ರ ರಹಸ್ಯವನ್ನು ಒಂಬತ್ತು ಸ್ರಗ್ಧರಾವೃತ್ತಗಳು. ಆರಾಧನಾ ಕಾರಿಕೆಯ ಎರಡು ಸರಳ ಶ್ಲೋಕಗಳಲ್ಲಿ ಆರಾಧನಾ ಕ್ರಮವು ನಿರೂಪಿತವಾಗಿದೆ. ವೈಶ್ವದೇವಕಾರಿಕೆಯೆಂಬ ಮತ್ತೊಂದು ಗ್ರಂಥದಲ್ಲಿ ಪಂಚಕಾಲಕೃತ್ಯಗಳಲ್ಲಿ ವೈಶ್ವದೇವಯಾಗದ ವಿವರಣೆಯಿದೆ.

## ದ್ರವಿಡೋಪನಿಷತ್ತಾತ್ಪರ್ಯ ರತ್ನಾವಳಿ

ಇದು ಪದ್ಯರೂಪದಲ್ಲಿದೆ. ಶ್ರೀ ಶಠಕೋಪ ದಿವ್ಯಸೂರಿಗಳ ಗಾಥಾತ್ಮಕ ದಿವ್ಯಪ್ರಬಂಧಾರ್ಥ ಸಂಗ್ರಹ ರೂಪವಾದದು. ಇಲ್ಲಿ ೧೩೦ ಸ್ರಗ್ಧರಾ ಶ್ಲೋಕಗಳಿವೆ. ಆದಿಯಲ್ಲಿ ಉಪೋದ್ಘಾತರೂಪವಾದ ಹತ್ತು ಶ್ಲೋಕಗಳೂ ಮುಂದೆ ಪ್ರತಿದಶಕಕ್ಕೂ ಒಂದರಂತೆ ನೂರು ದಶಕಗಳಿವೆ. ನೂರು ಶ್ಲೋಕಗಳೂ ಪ್ರತಿಶತಕಕ್ಕೂ ಒಂದರಂತೆ ಹತ್ತು ಶತಕಗಳಿಗೆ ಹತ್ತು ಪದ್ಯಗಳೂ ಕೊನೆಯಲ್ಲಿ ಉಪಸಂಹಾರ ರೂಪವಾದ ಆರು ಪದ್ಯಗಳೂ ಮಧ್ಯೆ ೧-೪-೧ ಕ್ಕೆ ಒಂದು, ೪-೮-೧ ಕ್ಕೆ ಒಂದು, ೪-೯-೧ ಕ್ಕೆ ಎರಡು ಹೆಚ್ಚು ಶ್ಲೋಕಗಳೂ ಉಕ್ತವಾಗಿದೆ. ನಮ್ಮಾಳ್ವಾರ್ರಂತೆಯೇ ಆಚಾರ್ಯರು ಇಲ್ಲಿಯ ಪ್ರಪತ್ತಿಸಾರವನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ ಇದಕ್ಕೆ ವೆಂಕಟಾಚಾರ್ಯರ ತಮಿಳು ವ್ಯಾಖ್ಯಾನವಿದೆ. 'ತಾತ್ಪರ್ಯ ರತ್ನಾವಳಿ'ಯ ಆರಂಭದಲ್ಲಿ ತಿರುವಾಯ್ಮೊಳಿಯ ಶ್ರೇಷ್ಠತ್ವವನ್ನು ಹೀಗೆ ವರ್ಣಿಸಿದ್ದಾರೆ :—

ಸಾರಸ್ಸಾರಸ್ವತಾನಾಂ ಶಠರಿಪುಭಣಿತಿಃ
ಶಾಂತಿ ಶುದ್ಧಾಂತಸೀಮಾ
ಮಾಯಾ ಮಾಯಾಮಿನೀ ಭಿಃ ಸ್ವಗುಣ
ವಿತತಿ ಭಿರ್ಬಂಧಯಂತೀಂ ಧಯಂತೀ !
ಪಾರಂ ಪಾರಂಪರೀತೋ ಭವಜಲಧಿ ಭವನ್ಮ
ಜ್ಜನಾನಾಂ ಜನಾನಾಂ
ಪ್ರತ್ಯಕ್ ಪ್ರತ್ಯಕ್ಷಯೇನ್ನಃ ಪ್ರತಿಸಿ ಯತ
ರಮಾ ಸನ್ನಿಧಾನಂ ನಿಧಾನಾಮ್ ॥

## ದ್ರಮಿಡೋಪನಿಷತ್ಸಾರ

ಇದು ಮೇಲಿನಂತೆಯೇ ಶಠಗೋಪರ ಗಾಥಾ ಸಹಸ್ರಸಾರಸಂಗ್ರಹ. ಸ್ರಗ್ಧರಾ ಮತ್ತು ಶಿಖರಿಣೀ ವೃತ್ತಗಳಲ್ಲಿವೆ. ೨೬ ಸಂಖ್ಯಾತ್ಮಕವಾದುದು. ಇದಕ್ಕೆ ಶ್ರೀನಿವಾಸ ದೇಶಿಕರ ತಮಿಳು ವ್ಯಾಖಾನವಿದೆ.

ಒಟ್ಟಿನಲ್ಲಿ ವೇದಾಂತದೇಶಿಕರವರ ಸ್ತೋತ್ರ ಗ್ರಂಥಗಳು ಸಾಹಿತ್ಯ ದೃಷ್ಟಿಯಿಂದಲೂ ದಾರ್ಶನಿಕ ದೃಷ್ಟಿಯಿಂದಲೂ ಬಹು ಉಚ್ಚಸ್ಥಾನವನ್ನಾಕ್ರಮಿಸುತ್ತವೆ. +

---

( 10ನೇ ಪುಟದಿಂದ )

ಎಲ್ಲರೂ ಹೊಗಳುತ್ತಾರೆ—ಆದರಲ್ಲೇನು ಹೆಚ್ಚುಗಾರಿಕೆ? ಈ ಶರಣರಹಿತ ದೀನ ಹೀನನ ಬಗ್ಗೆ—ಒಂದೇ ಒಂದು ಮಾತು ಸಿಫಾರಸು ಮಾಡಿದರೆ ಇವನೂ ಉದ್ಧಾರವಾಗುತ್ತಾನೆ, ನಿಮಗೂ ಪುಣ್ಯ ಬರುತ್ತದೆ ಎಂಬ ಅರ್ಥ ಕೊಡುವ ಒಂದು ಕವಿತೆ ಬರೆದಿದ್ದಾರೆ.

ಸಾಕೇತ ಸಾರ್ವಭೌಮ ರತ್ನ ಸಿಂಹಾಸನದ ಮೇಲೆ ಸೀತಾ ದ್ವಿತೀಯನಾಗಿ ಸುಖಾಸೀನನಾಗಿದ್ದಾನೆ. ಪಾದಪೀಠದ ಬಳಿ ಪವನಕುಮಾರ ಕೈ ಮುಗಿದು ಕುಳಿತಿದ್ದಾನೆ. ಭರತ—ಲಕ್ಷ್ಮಣ—ಶತ್ರುಘ್ನರು ತಂತಮ್ಮ ಸೇವೆಯನ್ನು ಅಗ್ರಜನಿಗೆ ಅರ್ಪಿಸುತ್ತಲಿದ್ದಾರೆ. ತುಲಸೀದಾಸನ ಬಿನ್ನಹ ಎಲ್ಲರಿಗೂ ನೆನಪಿದೆ. ಇದು ಸೂಕ್ತ ಸಮಯವೆಂದು ಭಾವಿಸಿ ಮಾರುತಿ ಭರತನ ಕಡೆ ನೋಡಿದ. ಭರತನಿಗೆ ಅರ್ಥವಾಯ್ತು. ಲಕ್ಷ್ಮಣನ ಕಡೆ ನೋಡಿದ. ಲಕ್ಷ್ಮಣ ಪರಮ ಇಂಗಿತಜ್ಞ. ಅಣ್ಣನಾದ ದಾಶರಥಿಗೆ ನಮಸ್ಕರಿಸಿ—"ಕಲಿಯುಗದಲ್ಲಿ ನಿಮ್ಮ ನಾಮಸ್ಮರಣೆ ಮಾಡುತ್ತ ನಿಮ್ಮನ್ನೇ ಭದ್ರವಾಗಿ ನಂಬಿ ನಿಮ್ಮ ಕೃಪೆಗಾಗಿ ಕಾದಿರುವ ಒಬ್ಬಾತನಿದ್ದಾನೆ. ಆತನ ಹೆಸರು ತುಲಸೀದಾಸ. ಆತನು ಪ್ರಭು ಸನ್ನಿಧಿಗೊಂದು "ವಿನಯ ಪತ್ರಿಕೆ"ಯನ್ನು ಸಮರ್ಪಿಸಿದ್ದಾನೆ. ಕೃಪಾ ದೃಷ್ಟಿಗಾಗಿ ಕಾದಿರುವ ಆ ಪತ್ರಿಕೆಯನ್ನು ಪರಾಂಬರಿಸೋಣವಾಗಬೇಕು" ಎಂದು ಬಿನ್ನಹ ಮಾಡಿದ. ಪ್ರಭು ಮಂದಹಾಸ ಬೀರುತ್ತ "ಹೌದು, ಸೌಮಿತ್ರಿ, ತುಲಸೀದಾಸನ ವಿಚಾರ ನನಗೆ ಗೊತ್ತಿದೆ. ಸೀತೆ ನಾಲ್ಕಾರುಸಲ ಆ ವಿಷಯವನ್ನು ನನ್ನಲ್ಲಿ ಪ್ರಸ್ತಾಪವಮಾಡಿದ್ದಾಳೆ. ಎಲ್ಲಿ,ಆ 'ವಿನಯಪತ್ರಿಕೆ'ಯನ್ನಿಲ್ಲಿ ಕೊಡು"ಎಂದ. ಪುಲಕಿತನಾದ ಸೌಮಿತ್ರಿ ಅದನ್ನು ಸ್ವಾಮಿಯ ಕೈಲಿಟ್ಟ. ದೀನಜನಮಂದಾರನಾದ ಸ್ವಾಮಿ ಮುಕ್ತಾಮಣಿಯಂತಿರುವ ಮುದ್ದಾದ ಅಕ್ಷರಗಳಿಂದ ತನ್ನ 'ಸಹಿ ಹಾಕಿದ'. ತುಲಸೀದಾಸ ಧನ್ಯೋಸ್ಮಿ ಎಂದು ಪ್ರಭು ಪಾದಾರವಿಂದದಲ್ಲಿ ದಿಂಡುರುಳಿಬಿದ್ದ.

ಇದು ಈ ಗ್ರಂಥದ ಕೊನೆಯ ಪದ್ಯದ ಸಾರಾಂಶ. ಇದು ಕವಿಕಂಡ ಕನಸಿರಬಹುದೇ ? ನಿರಂತರ ರಾಮಧ್ಯಾನ ನಿರತನಾಗಿದ್ದ ಋಷಿಕವಿ ತುಲಸೀದಾಸ, ಜಗತ್ತನ್ನೆಲ್ಲ ರಾಮಮಯವಾಗಿ ಕಂಡಿದ್ದ ದಾರ್ಶನಿಕ, ಬಾಳಿನಲ್ಲಿ ರಾಮನನ್ನಲ್ಲದೆ ಬೇರೇನನ್ನೂ ಭದ್ರವೆಂದು ನಂಬದೇ ಇದ್ದ ಶ್ರದ್ಧಾಳು ಈ ಕನಸು ಕಂಡದ್ದರಲ್ಲಿ ಆಶ್ಚರ್ಯವಾದರೂ ಏನುಂಟು ? ಇದು ಕನಸೋ ? ದಾಸಶ್ರೇಷ್ಠರು ಕಂಡಂತಹ ದಿವ್ಯದರ್ಶನವೋ!!

# ಯುವವಾಣಿ

# ಮಹಾಭಾರತದಲ್ಲಿ ವ್ಯಕ್ತಿ ಸುಭಾಷಿತ

—ಶ್ರೀ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್

ವ್ಯವಹಾರಜ್ಞಾನವನ್ನು ಬೋಧಿಸುವ ಅನೇಕ ವಾಕ್ಯಗಳು ಭಾರತದಲ್ಲಿ ಬರುತ್ತಲೇ ಇರುತ್ತವೆ. ವ್ಯಕ್ತಿಜೀವನಕ್ಕೆ ಸಂಬಂಧಿಸಿದ ಕೆಲವನ್ನು ಇಲ್ಲಿ ಕೊಡಬಹುದು.

ಅರ್ಥವಚ್ಚ ವಿಚಿತ್ರಂಚ ನಶಕ್ಯಂ ಬಹು
ಭಾಷಿತುಂ

ಬಹು ಮಾತನ್ನೂ ಆಡಿ ಎಲ್ಲ ಮಾತೂ ಅರ್ಥ ಯುಕ್ತವಾಗಿಯೂ ಚಮತ್ಕಾರಕವಾಗಿಯೂ ಇರುವಂತೆ ಆಡುವುದು ಸಾಧ್ಯವಲ್ಲ.

ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ
ಶಕ್ತಿರ್ನವಿದ್ಯತೇ
ಜೀರ್ಯನ್ತ್ಯಪಿಹಿ ಕಾಷ್ಠಾನಿ ದರಿದ್ರಾಣಾಂ
ಮಹೀಪತೇ

ಪ್ರಾಯೇಣ ಲೋಕದಲ್ಲಿ ಪುಣ್ಯವಂತರಿಗೆ ಜೀರ್ಣ ಶಕ್ತಿ ಇರುವುದಿಲ್ಲ; ಬಡವರು ಕೊರಡನ್ನು ತಿಂದೂ ಜೀರ್ಣಿಸಿಕೊಳ್ಳುತ್ತಾರೆ.

ಆತ್ಮನಾತ್ಮಾನಮನ್ವಿಚ್ಛೇತ್ ಮನೋ
ಬುದ್ಧೀಂದ್ರಿಯೈಃ ಯತೈಃ
ಆತ್ಮಾಹ್ಯೇವಾತ್ಮನೋ ಬಂಧುಃ ಆತ್ಮೈವ
ರಿಪುರಾತ್ಮನಃ

ಮನಸ್ಸು ಬುದ್ಧಿ ಇಂದ್ರಿಯಗಳನ್ನು ಎಚ್ಚರದಿಂದ ಇರಿಸಿಕೊಂಡು ತನ್ನನ್ನು ತಾನೇ ಪರಿಶೀಲಿಸಿಕೊಳ್ಳಬೇಕು. ತನಗೆ ತಾನೆ ಬಂಧು ; ತನಗೆ ತಾನೆ ಶತ್ರು.

ಯಸ್ಮೈ ದೇವಾಃ ಪ್ರಯಚ್ಛಂತಿ ಪುರುಷಾಯ
ಪರಾಭವಂ
ಬುದ್ಧಿಂತಸ್ಯಾಪಕರ್ಷನ್ತಿ ಸೋವಾಚೀನಾನಿ
ಪಶ್ಯತಿ

ದೇವತೆಗಳು ಯಾವನಿಗೆ ಪರಾಭವವನ್ನು ಬಯಸುವವರೊ ಅವನ ಬುದ್ಧಿಯನ್ನು ಸೆಳೆದುಕೊಳ್ಳುವರು, ಅವನು ಎಲ್ಲವನ್ನೂ ತಲೆಕೆಳಗಾಗಿ ಕಾಣುವನು.

ನದೇವಾಯುಷ್ಟಿಮಾದಾಯ ರಕ್ಷಂತಿ ಪಶು
ಪಾಲವತ್
ಯಂತು ರಕ್ಷಿತುಮಿಚ್ಛನ್ತಿ ಬುದ್ಧ್ಯಾ ಶಿ
ಸಂಯೋಜಯನ್ತಿತಂ

ದೇವತೆಗಳು ದನಕಾಯುವವರಂತೆ ದೊಣ್ಣೆಯಿಂದ ಹೊಡೆದು ಕಾಪಾಡುವುದಿಲ್ಲ. ಯಾರನ್ನು ರಕ್ಷಿಸ ಬಯಸುವರೋ ಅವನಿಗೆ ಬುದ್ಧಿಯನ್ನು ಕೊಡುತ್ತಾರೆ.

ನಸ್ವಪ್ನೇನ ಜಯೇತ್ ನಿದ್ರಾಂ ನಕಾಮೇನ
ಜಯೇತ್ ಸ್ತ್ರಿಯಃ
ನೇನ್ಧನೇನ ಜಯೇದಗ್ನಿಂ ನಪಾನೇನ
ಸುರಾಂಜಯೇತ್

ಮಲಗಿರುವುದರಿಂದ ನಿದ್ರೆಯನ್ನು, ಭೋಗದಿಂದ ಸ್ತ್ರೀಯರನ್ನು, ಸೌದೆಯಿಂದ ಕಿಚ್ಚನ್ನು, ಕುಡಿದು ಕುಡಿದು ಸುರೆಯನ್ನು ಜಯಿಸುವುದು ಆಗದ ಮಾತು.

ಪಿಬನ್ತ್ಯೇವೋದಕಂ ಗಾವೋ ಮಂಡೂಕೇಷು
ರುವತ್ಸ್ವಪಿ

ಕಪ್ಪೆಗಳು ವಟಗುಟ್ಟುತ್ತಿದ್ದರೂ ದನ ನೀರನ್ನು ಕುಡಿದೇ ಹೋಗುತ್ತವೆ.

ಮೃತ್ಯುರಾಪದ್ಯತೇ ಮೋಹಾತ್ ಸತ್ಯೇನಾ
ಪದ್ಯತೇಽಮೃತಂ

ಮೋಹದಿಂದ ಮೃತ್ಯು ಸತ್ಯದಿಂದ ಅಮೃತತ್ವ ಸಿದ್ಧಿಸುತ್ತವೆ.

ಯಃಕಶ್ಚಿದಪ್ಯ ಸಂಬದ್ಧೋ ಮಿತ್ರಭಾವೇನ
ವರ್ತತೇ
ಸ ಏವಬಂಧುಸ್ತನ್ಮಿತ್ರಂ ಸಾಗತಿಸ್ತ-
ತ್ಪರಾಯಣಂ

ಮಿತ್ರಭಾವದಿಂದ ವರ್ತಿಸುವ ಯಾವನೇ ಇರಲಿ, ಸಂಬಂಧಿಯಲ್ಲದಿದ್ದರೂ ಅವನ ಬಂಧು, ಮಿತ್ರನು; ಅವನು ಗತಿ, ಅವನು ದಿಕ್ಕು.

ಅಕಸ್ಮಾದೇವ ಕುಪ್ಯನ್ತಿ ಪ್ರಸೀದಂತ್ಯ-
ನಿಮಿತ್ತತಃ
ಶೀಲಮೇತದಸಾಧೂನಾಂ ಅಭ್ರಂ
ಪಾರಿಪ್ಲವಂ ಯಥಾ

ಕಾರಣವಿಲ್ಲದೆ ಕೋಪಿಸುತ್ತಾರೆ ; ನಿಮಿತ್ತವಿಲ್ಲದೆ ಪ್ರಸನ್ನರಾಗುತ್ತಾರೆ ; ಅಸ್ಥಿರವಾದ ಮೋಡದಂತೆ ಅಸಾಧುಗಳ ಶೀಲ.

ಅತಿಮಾನೋಽತಿವಾದಶ್ಚ ತಥಾಽತ್ಯಾಗೋ-
ನರಾಧಿಪ
ಕ್ರೋಧಶ್ಚಾತ್ಮವಿಧಿತ್ಸಾಚ ಮಿತ್ರದ್ರೋಹಶ್ಚ-
ತಾನಿಷಟ್
ಏತ ಏವಾಸಯಸ್ತೀಕ್ಷ್ಣಾಃ ಕೃಂತಂತ್ಯಾ-
ಯೂಂಷಿ ದೇಹಿನಾಂ
ಏತಾನಿಮಾನವಾನ್ ಘ್ನಂತಿ ನಮೃತ್ಯುಃ
ಭದ್ರಮಸ್ತುತೇ

ಒಬ್ಬ ಮನುಷ್ಯನ ಆಯುಸ್ಸನ್ನು ಅವನ ಅತಿಮಾನ ಅತಿವಾದ ಅತ್ಯಾಗ, ಕ್ರೋಧ ಆತ್ಮವಿಧಿತ್ಸೆ ಮಿತ್ರದ್ರೋಹ ಈ ಆರು ತೀಕ್ಷ್ಣವಾದ ಚೂರಿಗಳು ಕತ್ತರಿಸುತ್ತವೆ ; ಮನುಷ್ಯರನ್ನು ಕೊಲ್ಲುವವು ಇವೇ, ಮೃತ್ಯು ಅಲ್ಲ.

ಜ್ಞಾನತೃಪ್ತಃ ಸುಖಂಶೇತೇ ಹ್ಯಮೃತಾತ್ಮಾ
ನಸಂಶಯಃ

ಜ್ಞಾನತೃಪ್ತನು ಅಮೃತಾತ್ಮನಾಗಿ ಸುಖವಾಗಿ ನಿದ್ರಿಸುತ್ತಾನೆ.

ಅನನ್ತಮಿವಮೇವಿತ್ತಂ ಯಸ್ಯಮೇನಾಸ್ತಿ
ಕಿಂಚನ
ಮಿಥಿಲಾಯಾಂ ಪ್ರದೀಪ್ತಾಯಾಂ
ನ ಮೇ ದಹ್ಯತಿ ಕಿಂಚನ

ಯುವವಾಣಿಯ ಆರಂಭದ ಲೇಖನವಾಗಿ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ 'ಭಾರತ ತೀರ್ಥ' ಕೃತಿಯ ಒಂದು ಭಾಗವನ್ನು ಉದ್ಧರಿಸಲಾಗಿದೆ. ಕನ್ನಡದ ಆಸ್ತಿ ಎಂದು ಹೆಸರಾದ ಮಾಸ್ತಿಯವರು ಧಾರ್ಮಿಕ ರಂಗದಲ್ಲೂ ಹಿರಿಯರು. ಅವರ ಲೇಖನಗಳನ್ನು ಪುನರ್ಮುದ್ರಿಸಲು 'ಸಪ್ತಗಿರಿಗೆ' ಅನುಮತಿ ನೀಡಿರುವ ಅವರಿಗೆ ಪತ್ರಿಕೆಯ ಕೃತಜ್ಞತೆಗಳು —ಸಂ—

ನನ್ನದು ಎಂದು ಏನೊಂದೂ ಇಲ್ಲದ ನನ್ನ ವಿತ್ತ ಅನಂತವಂತೆ. ಮಿಥಿಲೆ ಸುಟ್ಟುಹೋಗಲಿ ; ನನಗೆ ಕಳವಳವಿಲ್ಲ.

ಗುರುರಾತ್ಮವತಾಂ ಶಾಸ್ತಾ ಶಾಸ್ತಾರಾಜಾ
ದುರಾತ್ಮನಾಂ
ಅನ್ತಃ ಪ್ರಚ್ಛನ್ನಪಾಪಾನಾಂ ಶಾಸ್ತಾ
ವೈವಸ್ವತೋ ಯಮಃ

ಆತ್ಮವಂತರಿಗೆ ಗುರು ಶಿಕ್ಷಕ ; ದುರಾತ್ಮರಿಗೆ ರಾಜ ಶಿಕ್ಷಕ ; ಒಳಗೆ ಮರೆಸಿರುವ ಪಾಪದ ಜನರಿಗೆ ವೈವಸ್ವತ ಯಮನು ಶಿಕ್ಷಕ.

ಧನೇನಾಧರ್ಮಲಬ್ಧೇನ ಯಚ್ಛಿದ್ರಮಪಿ
ಧೀಯತೇ
ಅಸಂವೃತಂ ತದ್ಭವತಿ ತತೋಽನ್ಯದವ-
ಧೀರ್ಯತೇ

ಅಧರ್ಮದಿಂದ ಬಂದ ಧನದಿಂದ ಪಾಪವನ್ನು ಕಳೆಯನೋಡಿದರೆ ಅದು ಕಳೆಯುವುದಿಲ್ಲ; ಧರ್ಮದಿಂದ ಗಳಿಸಿದ ಧನದಿಂದಾದರೆ ಅದು ಕಳೆಯುತ್ತದೆ.

ತೃಣಾನಿಭೂಮಿರುದಕಂ ವಾಕ್ಚತುರ್ಥೀ ಚ
ಸೂನೃತಾ
ಸತಾಮೇತಾನಿಗೇಹೇಷು ನೋಚ್ಛಿದ್ಯನ್ತೇ
ಕದಾಚನ

ಒಂದು ಚಾಪೆ, ಒಂದಿಷ್ಟು ಸ್ಥಳ, ಇಷ್ಟು ನೀರು, ಎರಡು ಒಳ್ಳೆಯ ಮಾತು, ಇವು ಒಳ್ಳೆಯವರ ಮನೆಯಲ್ಲಿ ಎಂದಾಗಲಿ ದೊರೆಯದೆ ಇರುವುದಿಲ್ಲ.

ಶ್ರದ್ಧಯಾ ಪರಯಾ ರಾಜನ್ ಉಪನೀತಾನಿ
ಸತ್ಕೃತಿಂ
ಪ್ರವೃತ್ತಾನಿ ಮಹಾಪ್ರಾಜ್ಞ ಧರ್ಮಿಣಾಂ
ಪುಣ್ಯಕರ್ಮಿಣಾಂ

ಪುಣ್ಯ ಕರ್ಮಿಗಳಾದ ಧರ್ಮಿಷ್ಠರ ಸ್ವತ್ತು ಅವರ ಅತ್ಯಂತ ಶ್ರದ್ಧಾಪೂರ್ವಕವಾದ ಅತಿಥಿ ಸತ್ಕಾರದಿಂದ ಸಾರ್ಥಕವಾಗುತ್ತದೆ.

ಜೀರ್ಣಮನ್ನಂ ಪ್ರಶಂಸನ್ತಿ ಭಾರ್ಯಾಂಚ
ಗತಯೌವನಾಂ
ಶೂರಂ ವಿಜಿತಸಂಗ್ರಾಮಂ ಗತಪಾರಂ-
ತಪಸ್ವಿನಂ

ಅನ್ನವನ್ನು ಜೀರ್ಣವಾದ ಮೇಲೆ ಭಾರ್ಯೆಯನ್ನು ಅವಳ ಯೌವನ ಮುಗಿದ ಮೇಲೆ ಶೂರನನ್ನು ಯುದ್ಧದಲ್ಲಿ ಗೆದ್ದಮೇಲೆ ತಪಸ್ವಿಯನ್ನು ಅವನು ದಡ ಮುಟ್ಟಿದಮೇಲೆ ಹೊಗಳಬೇಕು. ಆಗ ಅದು ನಿಜದ ಹೊಗಳಿಕೆ.

ಯಾದೃಶಃ ಪುರುಷಸ್ಯಾತ್ಮಾ ತಾದೃಶಂ
ಸಂಪ್ರಭಾಷತೇ
ಯಥಾ ರೂಪೋಽಂತರಾತ್ಮಾತೇ ತಥಾ
ರೂಪಂ ಪ್ರಭಾಷಸೇ

ಮನುಷ್ಯನ ಚೇತನ ಎಂಥದು ಅಂಥದಾಗಿ ಅವನು ನುಡಿಯುತ್ತಾನೆ. ನಿನ್ನ ಅಂತರಾತ್ಮದ ರೂಪ ಹೇಗಿದೆ ನಿನ್ನ ಮಾತಿನ ರೂಪ ಹಾಗಿದೆ.

ತಪೋಬಲಂ ತಾಪಸಾನಾಂ ಬ್ರಹ್ಮಬ್ರಹ್ಮ
ವಿದಾಂ ಬಲಂ
ಹಿಂಸಾಬಲಮಸಾಧೂನಾಂ ಕ್ಷಮಾಗುಣ
ವತಾಂ ಬಲಂ

ತಪಸ್ವಿಗಳಿಗೆ ಬಲವಿರುವುದು ತಪಸ್ಸಿನಲ್ಲಿ; ಬ್ರಹ್ಮಜ್ಞಾನಿಗಳಿಗೆ ಬ್ರಹ್ಮದಲ್ಲಿ; ಅಸಾಧುಗಳಿಗೆ ಬಲವಿರುವುದು ಹಿಂಸೆಯಲ್ಲಿ; ಗುಣವಂತರಿಗೆ ಕ್ಷಮೆಯಲ್ಲಿ.

ಸುಖಾರ್ಥಿನಃ ಕುತೋ ವಿದ್ಯಾ ನಾಸ್ತಿ
ವಿದ್ಯಾರ್ಥಿನಃ ಸುಖಂ
ಸುಖಾರ್ಥೀವಾತ್ಯಜೇತ್ ವಿದ್ಯಾಂ
ವಿದ್ಯಾರ್ಥೀವಾತ್ಯಜೇತ್ ಸುಖಂ

ಸುಖ ಬಯಸಿದವನಿಗೆ ವಿದ್ಯೆ ಎಲ್ಲಿಯದು ? ವಿದ್ಯೆ ಬಯಸಿದವನಿಗೆ ಸುಖವೆನ್ನುವುದು ಇಲ್ಲ. ಇಲ್ಲವೆ ಸುಖ ಬಯಸಿ ವಿದ್ಯೆಯ ಆಸೆಯನ್ನು ಬಿಡಬೇಕು; ಇಲ್ಲ ವಿದ್ಯೆಯನ್ನು ಬಯಸಿ ಸುಖದ ಲಾಲಸೆಯನ್ನು ಬಿಡಬೇಕು.

ಉಪಕಾರಾದ್ಧ್ವವೇನ್ ಮಿತ್ರಂ ಅಪಕಾರಾದ್ಧ
ವೇದರಿ

ಉಪಕಾರವಮಾಡುವುದರಿಂದ ಮಿತ್ರ ಆಗುತ್ತಾನೆ ; ಅಪಕಾರವಮಾಡುವುದರಿಂದ ಶತ್ರು ಆಗುತ್ತಾನೆ.

ಯಃ ಸಮಾಪತಿತಂ ಹರ್ಷಂ ದೈನ್ಯಂ ವಾ ನನಿಯಚ್ಛತಿ
ಸನಶ್ಯತಿ ಶ್ರಿಯಂ ಪ್ರಾಪ್ಯ ಪಾತ್ರಮಾಮ ಮಿವಾಮ್ಭಸಿ

ತಟ್ಟನೆ ಒದಗಿದ ಹರ್ಷವನ್ನಾಗಲಿ ದೈನ್ಯವನ್ನಾಗಲಿ ಯಾವನು ತಡೆದುಕೊಳ್ಳುವುದಿಲ್ಲ ಅವನು ಹಸಿಯಮಣ್ಣಿನ ಪಾತ್ರೆ ನೀರಿನಲ್ಲಿ ಹೇಗೆ ಹಾಗೆ ನಾಶವಾಗುತ್ತಾನೆ.

ಮನೋದೋಷ ವಿಹೀನಾನಾಂ ನದೋಷ ಸ್ಸ್ಯಾತ್ತಥಾ ತವ
ಅನ್ಯಥಾಲಿಂಗ್ಯತೇಕಾನ್ತಾ ಸ್ನೇಹೇನದು ಹಿತಾಽನ್ಯಥಾ

ಮನಸ್ಸಿನ ದೋಷ ಇಲ್ಲದವರಿಗೆ ದೋಷ ಅಡಸುವುದಿಲ್ಲ. ನಿನಗೂ ಅಷ್ಟೆ. ಕಾಂತೆಯನ್ನು ಆಲಿಂಗಿಸುವ ರೀತಿ ಬೇರೆ; ಮಗಳನ್ನು ಆಲಿಂಗಿಸುವ ಸ್ನೇಹ ಬೇರೆ.

ಶ್ರದ್ದಧಾನಃ ಶುಭಾಂ ವಿದ್ಯಾಂ ಹೀನಾದಪಿ ಸಮಾಪ್ನುಯಾತ್
ಸುವರ್ಣಮಪಿ ಚಾಮೇಧ್ಯಾತ್ ಆದದೀತಾ ವಿಚಾರಯನ್

ಒಳ್ಳೆಯದೆಂಬ ವಿದ್ಯೆಯನ್ನು ಹೇಳಿಕೊಡುವವರು ಹೀನರೆಂಬ ಕಾರಣದಿಂದ ಅಸಡ್ಡೆ ಮಾಡದೆ ಕಲಿತುಕೊಳ್ಳತಕ್ಕದ್ದು. ಕಸದ ಮಧ್ಯೆ ಬಿದ್ದಿರುವ ಕಾರಣದಿಂದ ಚಿನ್ನವನ್ನು ಎತ್ತಿಕೊಳ್ಳುವುದೆ ಬಿಡುವುದೆ ಎಂದು ಯೋಚನೆ ಮಾಡಬೇಡ.

ದ್ವಾವಿಮೌ ಪುರುಷವ್ಯಾಘ್ರ ಪರಪ್ರತ್ಯಯ ಕಾರಿಣೌ
ಸ್ತ್ರಿಯಃ ಕಾಮಿತಕಾಮಿನ್ಯಃ ಮೂರ್ಖಾಃ ಪೂಜಿತ ಪೂಜಕಾಃ

ಈ ಎರಡು ರೀತಿಯ ಜನ ಇತರರ ತಿಳಿವಳಿಕೆಯಿಂದ ತಮ್ಮ ಕಾರ್ಯವನ್ನು ನಿರ್ಧರಿಸುವವರು: ಇತರರು ಬಯಸಿದರೆಂದು ಒಬ್ಬನನ್ನು ಬಯಸುವವರು ಸ್ತ್ರೀಯರು; ಇತರರು ಪೂಜಿಸಿದರೆಂದು ಒಬ್ಬನನ್ನು ಪೂಜಿಸುವವರು ಮೂರ್ಖರು.

ಗಂಧೇನಗಾವಃ ಪಶ್ಯಂತಿ ವೇದೈಃ ಪಶ್ಯಂತಿ ಬ್ರಾಹ್ಮಣಾಃ
ಚಾರೈಃ ಪಶ್ಯಂತಿ ರಾಜಾನಃ ಚಕ್ಷುರ್ಭ್ಯಾಂ ಇತರೇ ಜನಾಃ

ಹಸುಗಳು ಗಂಧದಿಂದ ಬ್ರಾಹ್ಮಣರು ವೇದದಿಂದ ರಾಜರು ಚಾರರಿಂದ ಜನ ಕಣ್ಣುಗಳಿಂದ ಕಾಣುತ್ತಾರೆ.

ನ ಕುಲಂ ವೃತ್ತಹೀನಸ್ಯ ಪ್ರಮಾಣಮಿತಿ ಮೇಮತಿಃ
ಅನ್ತ್ಯೇಷ್ವಪಿಹಿಜಾತಾನಾಂ ವೃತ್ತಮೇವ ವಿಶಿಷ್ಯತೇ

ನಡತೆಯಿಲ್ಲದವನಿಗೆ ಕುಲ ಪ್ರಮಾಣವಲ್ಲ ; ಅಂತ್ಯ ಕುಲದಲ್ಲಿ ಹುಟ್ಟಿದವರಲ್ಲಾದರೂ ಕೂಡ ನಡತೆಗೆ ಹೆಚ್ಚು ಬೆಲೆ.

ಭೂಯಾಂಸಂ ಲಭತೇ ಕ್ಲೇಶಂ ಯಾಗೌಃ ಭವತಿ ದುರ್ದುಹಾ
ಅಥ ಯಾ ಸುದುಘಾ ರಾಜನ್ ನೈವ ತಾಂ ವಿತುದನ್ತ್ಯಪಿ

ಸುಲಭವಾಗಿ ಕರೆಯದ ಹಸು ಮತ್ತಷ್ಟು ಕಷ್ಟಕ್ಕೆ ಗುರಿಯಾಗುತ್ತದೆ. ಯಾವ ಹಸು ಸುಲಭವಾಗಿ ಕರೆಯುತ್ತದೆ ಅದನ್ನು ಚಚ್ಚುವುದಿಲ್ಲ.

ಸುಖಾದೇವ ಪರಂ ದುಃಖಂ ದುಃಖಾದನ್ಯತ್ಪರಂ ಸುಖಂ
ದೃಶ್ಯತೇಹಿ ಮಹಾಪ್ರಾಜ್ಞ ನಿಯತಂವೈ ಸ್ವಭಾವತಃ

ಸುಖವಾದ ನಂತರ ದುಃಖ, ದುಃಖವಾದ ನಂತರ ಸುಖ, ಹೀಗೆ ಇವು ಒಂದಾದ ಮೇಲೊಂದು ಬರುವುದು ಸ್ವಭಾವತಃ ಗೊತ್ತಾಗಿರುವುದು ಕಾಣುತ್ತದೆ.

ಸರ್ವಃ ಸ್ವೇಸ್ವೇ ಗೃಹೇ ರಾಜಾ ಸರ್ವಃ ಸ್ವೇಸ್ವೇ ಗೃಹೇ ಗೃಹೀ
ನಿಗ್ರಹಾನುಗ್ರಹೌಃ ಕುರ್ವನ್ ತುಲ್ಯೋ ಜನಕರಾಜಭಿಃ

ಅವನವನ ಮನೆಯಲ್ಲಿ ಅವನವನು ರಾಜ ; ಅಲ್ಲಿ ನಿಗ್ರಹ ಅನುಗ್ರಹ ಮಾಡಲು ಅವನು ಜನಕ ತನ್ನ ರಾಷ್ಟ್ರದಲ್ಲಿ ಎಷ್ಟು ಅಷ್ಟು ಅಧಿಕಾರಿ.

ಗತಂ ಗಚ್ಛಂತಿ ಚಾಧ್ವಾನಂ ಸರ್ವಭೂತಾನಿ ಸರ್ವದಾ

ಎಲ್ಲ ಪ್ರಾಣಿಗಳೂ ಎಲ್ಲ ವೇಳೆಯೂ ನಡೆದ ದಾರಿಯನ್ನೇ ನಡೆಯುತ್ತವೆ.

ಅನಾಗತ ವಿಧಾತಾಚ ಪ್ರತ್ಯುತ್ಪನ್ನಮತಿಶ್ಚಯಃ
ದ್ವಾವೇತೌ ಸುಖಮೇಧೇತೇ ದೀರ್ಘಸೂತ್ರೀ ವಿನಶ್ಯತಿ

ಮೊದಲೇ ಯೋಚನೆ ಮಾಡಿಕೊಂಡಿರುವವನು, ತೊಡಕು ಕಂಡ ಕ್ಷಣದಲ್ಲಿ ಬುದ್ಧಿಯನ್ನು ಬಳಸಬಲ್ಲವನು, ಈ ಇಬ್ಬರು ಸುಖವನ್ನು ಪಡೆಯುವರು; ತೊಡಕು ಕಂಡಾಗ ಸಾವಧಾನವಾಗಿ ಯೋಚಿಸ ತೊಡಗುವವನು ನಾಶವಾಗುವನು.

ತಿಷ್ಠನ್ತ್ಯೇತೇ ಯಥಾಸ್ಥಾನಂ ನಗಾಹ್ಯೇಕ ನಿಕೇತನಾಃ
ತತಸ್ತ್ಯಜನ್ತಿ ತತ್ಸ್ಥಾನಂ ಪ್ರಾತಿ ಲೋಮ್ಯಾನ್ನವೇತಸಃ
ವೇತಸೇ ವೇಗಮಾಯಾನ್ತಂ ದೃಷ್ಟ್ವಾವ ನಮತಿ ನಾಪರೇ
ಸ ಚ ವೇಗೇ ಹ್ಯತಿಕ್ರಾನ್ತೇ ಸ್ಥಾನಮಾ ಪದ್ಯತೇ ಪುನಃ
ಮಾರತೋದಕವೇಗೇನ ಯೇ ನಮನ್ತ್ಯುನ್ನಮನ್ತಿ ಚ
ಓಷಧ್ಯಃ ಪಾದಪಾಗುಲ್ಮಾ ನ ತೇಯಾನ್ತಿ ಪರಾಭವಂ

ಪ್ರವಾಹಕ್ಕೆ ಎದುರುಬಿದ್ದು ಕಲ್ಲುಗುಂಡು ಸ್ಥಾನ ಚ್ಯುತವಾಗುತ್ತವೆ. ಆದರ ಎದುರಲ್ಲಿ ಬಗ್ಗುವ ಜಂಬು ಇದ್ದಲ್ಲಿ ಇರುತ್ತದೆ. ಪ್ರವಾಹ ಇಳಿದಮೇಲೆ ತಲೆ ಎತ್ತುತ್ತದೆ.

ನಾಸ್ತ್ಯಸಾಧ್ಯಂ ಬಲವತಾಂ ಸರ್ವಂ ಬಲವತಾಜಿತಂ

ಬಲವುಳ್ಳವನಿಗೆ ಅಸಾಧ್ಯವಾದದ್ದಿಲ್ಲ. ಬಲವುಳ್ಳವನು ಎಲ್ಲವನ್ನೂ ಗೆದ್ದಿದಾನೆ.

ಲುಬ್ಧಾನಾಂ ಶುಚಯೋದ್ವೇಷ್ಯಾಃ ಕಾತರಾಣಾಂ ತರಸ್ವಿನಃ
ಮೂರ್ಖಾಣಾಂ ಪಂಡಿತಾ ದ್ವೇಷ್ಯಾಃ ದರಿದ್ರಾಣಾಂ ಮಹಾಧನಾಃ
ಅಧಾರ್ಮಿಕಾಣಾಂ ಧರ್ಮಿಷ್ಠಾಃ ವಿರೂಪಾಣಾಂ ಸುರೂಪಿಣಃ

ಗುಣವಿಲ್ಲದವರಿಗೆ ಗುಣವುಳ್ಳವರನ್ನು ಕಂಡರೆ ಆಗುವುದಿಲ್ಲ.

ಪೂರ್ವೇ ವಯಸಿತತ್ಕುರ್ಯಾತ್ ಯೇನ ವೃದ್ಧಃ ಸುಖಂ ವಸೇತ್
ಅಷ್ಟಮಾಸೇನ ತತ್ಕುರ್ಯಾತ್ ಯೇನ ವರ್ಷಂ ಸುಖಂ ವಸೇತ್

ಮುಪ್ಪಿನಲ್ಲಿ ಸುಖವಾಗಿರಲು ಯಾವುದು ಬೇಕು ಅದನ್ನು ಪೂರ್ವ ವಯಸ್ಸಿನಲ್ಲಿ ಮಾಡಬೇಕು ; ವರ್ಷವೆಲ್ಲ ಸುಖವಾಗಿರಲು ಬೇಕಾದದ್ದನ್ನು ಎಂಟು ತಿಂಗಳಲ್ಲಿ ಮಾಡಿ ಇರಿಸಿಕೊಳ್ಳಬೇಕು.

ವಿಚಾರ್ಯಖಲುಪಶ್ಯಾಮಿ ತತ್ಸುಖಂ ಯತ್ರ ನಿರ್ವೃತಿಃ

ಯೋಚನೆಮಾಡಿದರೆ ಹೀಗೆ ಕಾಣುತ್ತದೆ : ನಿರ್ವೃತಿ ಎಲ್ಲಿ ಆ ಸ್ಥಿತಿ ಸೌಖ್ಯ.

★



# ಸನಾತನ ಧರ್ಮರಂಗ

## ಪುಣ್ಯಕ್ಷೇತ್ರಗಳು

| | | | | | | | | | | |
|---|---|---|---|---|---|---|---|---|---|---|
| 1 | | 2 | | × | 3 | | | | × | × |
| × | × | 4 | | | × | 5 | × | 6 | | |
| 7 | × | | × | 8 | | | | | × | × |
| | × | | × | 9 | 10 | × | 11 | | | |
| | × | | × | × | | × | 12 | | | |
| | × | | × | × | | 13 | | | | × |
| | 14 | × | 15 | 16 | × | | × | × | × | × |
| | | × | | | × | | × | 17 | | |
| × | | 18 | | | × | | 19 | | | |
| × | | | | | × | × | 20 | | | |
| 21 | | | × | | × | × | 22 | | | |

### ಮೇಲಿನಿಂದ ಕೆಳಕ್ಕೆ

2. ಶಿಲಾರಥವಿರುವ ಪಂಚಪಾಂಡವರ ಕ್ಷೇತ್ರ (6)
5. ಪಿತೃಶ್ರಾದ್ಧಕ್ಷೇತ್ರ (2)
7. ಶ್ರೀರಾಮಾನುಜರ ಜನ್ಮಸ್ಥಳ (6)
10. ತಲೆಯಿಂದ ಆರಂಭವಾಗುವ ಪುಣ್ಯಕ್ಷೇತ್ರ (3)
13. ಪದ್ಮಾವತಿ ಕ್ಷೇತ್ರ (4)
14. ಪಾರ್ವತಿ ಕನ್ಯೆಯಾಗಿಯೇ ನೆಲಸಿರುವ ಕ್ಷೇತ್ರ (5)
15. ಶ್ರೀ ಲಕ್ಷ್ಮೀ ನೃಸಿಂಹ ಕ್ಷೇತ್ರ (4)
16. ಶ್ರೀಕೃಷ್ಣನ ಊರು (5)
18. ಮೀನಾಕ್ಷೀ ಕ್ಷೇತ್ರ (3)

ಎನ್. ಆರ್. ಶ್ರೀನಿವಾಸ

### ಎಡದಿಂದ ಬಲಕ್ಕೆ

1. ಭೂವೈಕುಂಠವೆಂದು ಪ್ರಸಿದ್ಧವಾದ ಕ್ಷೇತ್ರ (4)
3. ಬಂಗಾರದ ಗರುಡೋತ್ಸವಕ್ಕೆ ಪ್ರಸಿದ್ಧವಾದದ್ದು (4)
4. ಹಾಸನಾಂಬಾದೇವಿ ನೆಲಸಿರುವ ಊರು (3)
6. ಶ್ರೀರಂಗನಾಥನ ತಮಿಳುನಾಡಿನ ಕ್ಷೇತ್ರ (3)
8. ಮಹಾಕಾಳಿ ನೆಲಸಿರುವ ತಮಿಳುನಾಡಿನ ಸ್ಥಳ (5)
9. ವಿಶ್ವನಾಥನ ಕ್ಷೇತ್ರ (2)
11. ಶ್ರೀರಾಮಭಕ್ತ ರಾಮದಾಸನ ಊರು (4)
12. ಷಣ್ಮುಖನ ಪ್ರಸಿದ್ಧ ಕ್ಷೇತ್ರ (4)
13. ಶ್ರೀ ರಾಘವೇಂದ್ರಸ್ವಾಮಿಗಳ ಕ್ಷೇತ್ರ (4)
17. ಶ್ರೀರಾಮನ ಜನ್ಮಸ್ಥಳ (3)
19. ಚೆಲುವ ನಾರಾಯಣನ ಊರು (4)
20. ಶ್ರೀರಾಮನು ಲಿಂಗಪೂಜೆ ಮಾಡಿದ ಸ್ಥಳ (4)
21. ಜಗನ್ನಾಥಸ್ವಾಮಿಯ ಲೀಲಾಸ್ಥಳ (2)
22. ಬೃಹದೇಶ್ವರ ದೇವಾಲಯ ವಿರುವ ಊರು (4)

(ಉತ್ತರಗಳಿಗಾಗಿ 38 ನೇ ಪುಟ ನೋಡಿ)

# ವಾರ್ತಾಲಹರಿ

## ಮಕರ ಸಂಕ್ರಾಂತಿ

ಜನವರಿ 15 ರಂದು ಮಕರ ಸಂಕ್ರಾಂತಿ, ಪಾರ್ವೇಟ ಉತ್ಸವಗಳು ತಿರುಮಲೆಯ ಶ್ರೀವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ ನಡೆಯಲಿರುವುದರಿಂದ ಅಂದು ಕಲ್ಯಾಣೋತ್ಸವ, ಬ್ರಹ್ಮೋತ್ಸವ, ಉಂಜಲ್ ಸೇವೆ ಮೊದಲಾದ ಎಲ್ಲ (ತಿರುಪ್ಪಾವಡಾಸೇವೆಯ ಹೊರತು) ಆರ್ಜಿತ ಸೇವೆಗಳನ್ನು ಅಂಗೀಕರಿಸಲಾಗದೆಂದು ಪತ್ರಿಕಾವರದಿ ತಿಳಿಸಿದೆ.

## ರಾಷ್ಟ್ರೀಯ ಆಧ್ಯಾತ್ಮಿಕ ಪ್ರಯೋಗ ಶಾಲೆ

ತಿರುಮಲೆ ಪರ್ವತ ಶ್ರೇಣಿಯನ್ನು ರಾಷ್ಟ್ರೀಯ ಆಧ್ಯಾತ್ಮಿಕ ಪ್ರಯೋಗ ಶಾಲೆಯನ್ನಾಗಿ ಪರಿವರ್ತಿಸುವ ಕಾರ್ಯಕ್ರಮವೊಂದು ಈಚೆಗೆ ಆರಂಭವಾಯಿತು.

ತಿ. ತಿ. ದೇ. ಗಳ ಆಡಳಿತ ನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿಯವರು ಕಾರ್ಯಕ್ರಮವನ್ನು ಗಿಡ ನೆಡುವುದರ ಮೂಲಕ ಸಾಂಕೇತಿಕವಾಗಿ ಉದ್ಘಾಟಿಸಿದರು. 5 ಕೋಟಿ ರೂಗಳ ಅಂದಾಜು ವ್ಯಯದಲ್ಲಿ ತಿ.ತಿ.ದೇವಸ್ಥಾನಗಳ ಪ್ರಕೃತಿ ಸೌಂದರ್ಯವನ್ನು ಫಲ, ಪುಷ್ಪ, ನೆರಳುಗಳನ್ನು ನೀಡುವ ಅಲಂಕರಣದ ಗಿಡ ಬಳ್ಳಿಗಳ ಬೆಳೆಯನ್ನುತೆಗೆಯುವುದೇ ಅಲ್ಲದೇ ತಿರುಪತಿಯ ಕಡೆಯಿಂದ ಕಂಡುಬರುವ ಬೆಟ್ಟದ ತಪ್ಪಲನ್ನೂ ವನ ಸೌಂದರ್ಯದಿಂದ ಸಿಂಗರಿಸಲಾಗುವುದು.

ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಮಾತನಾಡುತ್ತ ಇಲ್ಲಿ 33 ಉದ್ಯಾನವನಗಳನ್ನೂ, 4 ತಪೋವನಗಳನ್ನೂ ಈ ಕಾರ್ಯಕ್ರಮದಲ್ಲಿ ಉಂಟಾಗಿಸಲಾಗುವುದು ಎಂದರು. ತೀವ್ರಧಾರ್ಮಿಕ ಆಸಕ್ತರಿಗೆ ಇಲ್ಲಿ ಧ್ಯಾನಕ್ಕೆ ಅವಕಾಶ ಉಂಟಾಗುವುದೆಂದೂ ಆ ಮೂಲಕ ಧಾರ್ಮಿಕ ವಿಜ್ಞಾನಿಗಳಿಗೆ ಪ್ರೇರಕವಾಗುವುದೆಂದೂ ನುಡಿದರು.

ಮುಂದುವರೆದು, ಅವರು ಜಗತ್ತಿನಲ್ಲೇ ಪ್ರಾಯಶಃ ಮೊದಲನೆಯದಾದ ಗುಹಾ ಗ್ರಂಥಾಲಯವನ್ನು ಇಲ್ಲಿನ ವನಗಳಲ್ಲಿ ಸೃಜಿಸಲಾಗುವುದೆಂದರು. ಇದು ಧಾರ್ಮಿಕ ಕೃತಿಗಳ ಅಧ್ಯಯನ ಕೇಂದ್ರವಾಗಿರುವುದಷ್ಟೇ ಅಲ್ಲದೆ, ಇಲ್ಲಿನ ಶಿಲಾಪಟ್ಟಿಕೆಗಳಲ್ಲಿ ವೇದೋಪನಿಷತ್ತುಗಳ ಪಾಠವನ್ನೂ ಭಾಷ್ಯಗಳನ್ನೂ ಶಾಸನರೂಪದಲ್ಲಿಡಲಾಗುವುದು. ಒಂದು ಆಧ್ಯಾತ್ಮಿಕ ಸಂಗ್ರಹಾಲಯವನ್ನೂ ಇಲ್ಲಿ ಸ್ಥಾಪಿಸಲಾಗುವುದೆಂದರು. ಉಪ ಮುಖ್ಯ ಅರಣ್ಯಾಧಿಕಾರಿ ಶ್ರೀ ರಾಜಶೇಖರ ರೆಡ್ಡಿಯವರು ಈ ಕಾರ್ಯಕ್ರಮದ ಮುಖ್ಯ ಹಂತಗಳನ್ನು ವಿವರಿಸಿದರು.

## ಗೀತಾಜ್ಞಾನ ಯಜ್ಞ

ತಿ. ತಿ. ದೇಗಳ ಧಾರ್ಮಿಕ ಶಿಕ್ಷಣ ಕೇಂದ್ರ ಹಾಗೂ ಶ್ರೀ ಕಾಳಹಸ್ತಿಯ ಶುಕಬ್ರಹ್ಮಾಶ್ರಮದ ಶ್ರೀಶ್ರೀ ವಿದ್ಯಾಪ್ರಕಾಶಾನಂದಗಿರಿ ಸ್ವಾಮಿಯವರ ಸಂಯುಕ್ತ ಆಶ್ರಯದಲ್ಲಿ ತಿರುಪತಿ ಪ್ರಾಚ್ಯ ವಿದ್ಯಾ ಕಲಾಶಾಲೆಯಲ್ಲಿ 12–12–80 ರಿಂದ 31–12–80 ರವರೆಗೆ 99ನೆಯ ಗೀತಾಜ್ಞಾನಯಜ್ಞ ನಡೆಯಿತು. ಯಜ್ಞವನ್ನು ಡಿ 12 ರಂದು ಶ್ರೀ ಅನ್ನಮಾಚಾರ್ಯಕಲಾಮಂದಿರದಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರ ಉಪಸ್ಥಿತಿಯಲ್ಲಿ ಔಪಚಾರಿಕವಾಗಿ ಆರಂಭಿಸಲಾಯಿತು. ಧಾರ್ಮಿಕ ಶಿಕ್ಷಣಕೇಂದ್ರದ ಸಂಯೋಜನಾಧಿಕಾರಿ ಶ್ರೀನಾಗಯ್ಯನವರು ಕೇಂದ್ರದ ಚಟುವಟಿಕೆಗಳನ್ನು ವಿವರಿಸಿದರು. ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಯಜ್ಞ ಸಂಯೋಜಕರನ್ನೂ ಶ್ರೀಶ್ರೀ ಯವರನ್ನೂ ಅಭಿನಂದಿಸುತ್ತ ತಿ.ತಿ.ದೇ. ಧಾರ್ಮಿಕ ಶಿಕ್ಷಣಕೇಂದ್ರವನ್ನು ಶಿಕ್ಷಣದಲ್ಲಿ ಧಾರ್ಮಿಕ ಗುರುತ್ವಕಾಗಿ ಉಂಟಾಗಿಸಲಾಗಿದೆ ಎಂದು ತಿಳಿಸಿದರು. ಶ್ರೀಶ್ರೀ ಯವರು ತಮ್ಮ ಆಂಗ್ಲ ಭಾಷೆಯ ಕೃತಿ "ಶ್ರೀ ಗೀತಾ ಮಕರಂದ" ವನ್ನು ಕಾರ್ಯನಿರ್ವಹಣಾಧಿಕಾರಿಗಳಿಗೆ ಸಮರ್ಪಿಸಿದರು. ಸಮುದ್ರಾಲ ಲಕ್ಷ್ಮಣಯ್ಯನಾಯುಡು ಅವರು ಸಭೆಯನ್ನು ವಂದಿಸಿದರು.

## ಪಂಚರತ್ನ ಮಾಲ

"ಭಕ್ತರು ನೆನೆದರೆ ಭಗವಂತನೂ ಅನುಗ್ರಹಿಸುತ್ತಾನೆ. ಭಗವಂತನನ್ನು ನೆನೆಯಲು ಸಂಕೀರ್ತನೆ ಒಂದು ಪ್ರಧಾನ ಸಾಧನ" ಎಂದು ಪುಷ್ಪಗಿರಿಯ ಶ್ರೀಶ್ರೀ ವಿದ್ಯಾನರಸಿಂಹಭಾರತಿ ಸ್ವಾಮಿಗಳು ಘೋಷಿಸಿದರು. ಶ್ರೀಶ್ರೀಗಳು ಶ್ರೀ ವೆಂಕಟೇಶ್ವರ ಪಂಚರತ್ನ ಮಾಲಾದ ನಾಲ್ಕನೆಯ ಎಲ್. ಪಿ. ರಿಕಾರ್ಡ್ ಅನ್ನು ಬಿಡುಗಡೆ ಮಾಡುತ್ತ ಮೇಲ್ಕಂಡಂತೆ ತಿಳಿಸಿ, ಇಂತಹ ರೆಕಾರ್ಡ್‌ಗಳು ಮಾನವನ ಮನವನ್ನು ದೈವದತ್ತ ತಿರುಗಿಸುವಲ್ಲಿ ಸಾರ್ಥಕ ಸಹಾಯ ಮಾಡುವುದೆಂದರು.

ದೇಶದ ವಿವಿಧ ಕಾಲಗಳ ವಿವಿಧ ಹಿರಿಯರ ರಚನೆಗಳನ್ನು ಎಂ. ಎಸ್. ಸುಬ್ಬುಲಕ್ಷ್ಮಿಯವರು ಹಾಡಿರುವ ಈ ನಾಲ್ಕನೆಯ ಪಂಚರತ್ನ ಮಾಲಾ ಕೃತಿಯನ್ನು ಶ್ರೀ ಶ್ರೀ ಗಳು ಹೈದರಾಬಾದಿನ ಬಾಲಾಜಿ ಭವನದಲ್ಲಿ ಶ್ರೀ ಪಿ. ವಿ. ಚೌದರಿಯವರ ಅಧ್ಯಕ್ಷತೆಯಲ್ಲಿ ಬಿಡುಗಡೆ ಮಾಡಿದರು.

ಆಂಧ್ರಪ್ರದೇಶದ ಮಂತ್ರಿ ವರ್ಗದ ಶ್ರೀ ತುಲಸೀದಾಸ, ಹಾಗೂ ಶ್ರೀಮತಿ ಲಕ್ಷ್ಮೀಕಾಂತಮ್ಮ ಅವರುಗಳೂ ಭಾಗವಹಿಸಿದ್ದರು. ಸಭೆಯನ್ನು ಶ್ರೀ ಜಿ. ಶ್ರೀರಾಮಮೂರ್ತಿಯವರು ಸ್ವಾಗತಿಸಿದರು.

ಹಿಂದಿನ ಮೂರು ಪಂಚರತ್ನ ಮಾಲ ಕೃತಿಗಳನ್ನು ಬಿಡುಗಡೆ ಮಾಡಿದಂತೆಯೇ ದೆಹಲಿ, ಬೊಂಬಾಯಿ, ಕಲ್ಕತ್ತ, ಬೆಂಗಳೂರುಗಳಲ್ಲೂ ಸರಳ ಸಮಾರಂಭಗಳನ್ನೇರ್ಪಡಿಸಿ ಈ ನಾಲ್ಕನೆಯ ಪಂಚರತ್ನಮಾಲಾ ಕೃತಿಯನ್ನು ಬಿಡುಗಡೆ ಮಾಡಲು ಯೋಜಿಸಲಾಗಿದೆ.

## ಧಾರ್ಮಿಕ ವಸ್ತು ಸಂಗ್ರಹಾಲಯ

ತಿರುಮಲೆ ತಿರುಪತಿಗಳಲ್ಲಿ ತಿ. ತಿ. ದೇವಸ್ಥಾನಗಳ ಧಾರ್ಮಿಕ ವಸ್ತು ಸಂಗ್ರಹಾಲಯಗಳನ್ನು ದಿನಾಂಕ 26–12–80 ರಂದು ಭಾರತದ ರಾಷ್ಟ್ರಪತಿ ಶ್ರೀ ನೀಲಂ ಸಂಜೀವರೆಡ್ಡಿ ಅವರು ಉದ್ಘಾಟಿಸುವರೆಂದು ಪತ್ರಿಕಾವರದಿ ತಿಳಿಸಿದೆ. ಈ ವಸ್ತು ಸಂಗ್ರಹಾಲಯಗಳಲ್ಲಿ ಹಿಂದೂ ಧರ್ಮದ, ಶಿಲ್ಪ, ನೃತ್ಯ, ಸಂಗೀತ, ಯಜ್ಞ ಉಪಾಸನಾ ಪರಿಕರಗಳು, ವಿವರಗಳು ಹಾಗೂ ತಿರುಮಲೆಯ ಜೈವಿಕ, ಪ್ರಾಕೃತಿಕ ವಿವರಗಳೂ ಇರುವುವೆಂದು ಹೇಳಲಾಗಿದೆ.





# ಎನ್ನ ಮನಮಂದಿರದಲ್ಲಿ

ಹೊಳೆ ವಿಠಲ ಎನ್ನ ಮನಮಂದಿರದಲ್ಲಿ ||ಪ||
ತಳತಳ ಹೊಳೆಯುವ ಪದಕದಿಂದೊಪ್ಪುತ ||ಅ||

ಮಂದರೋದ್ಧಾರ ಮುಚಕುಂದ ವರದ
ಸಿಂಧು ಶಯನ ಹರಿ ಸುಂದರವದನ
ಮಂದಹಾಸದಲಿ ಮಂದಗಮನೆ ಕೂಡಿ
ಧಿಂಧಿಮಿ ಧಿಮಿಕೆಂದು ಕುಣಿ ಕುಣಿದಾಡುತ ||೧||

ಮನ್ಮಥನಯ್ಯನೆ ನಾಲ್ಕುಖನಾ ಪಿತ
ಸನ್ಮತಿದಾತ ಸಾಧು ಸನ್ಮಾನಿತ
ಜನ್ಮಾದಿ ರಹಿತ ಪರಮ ಪವಿತ್ರ
ಚಿನ್ಮಯ ಮೂರುತಿ ನಿನ್ನ ರೂಪ ತೋರುತ ||೨||

ಅರವಿಂದ ನಯನ ಇಂದಿರೆಯರಸ
ನಾರದ ವಂದ್ಯ ಮಂದಾಕಿನಿ ಪಿತ
ಸರ್ವವ್ಯಾಪ್ತ ಹರಿ ತಿರುಮಲೇಶ ವಿಠಲ
ಕರುಣಾನಿಧಿ ನಿನ್ನ ಬಿಂಬವ ತೋರುತ ||೩||

—ಜಯಸಿಂಹ.

## ನಿಮಗಿದು ತಿಳಿದಿದೆಯೇ?

ಉತ್ತರಗಳು

1. ವರಾಹಸ್ವಾಮಿ
2. ಋಗ್ವೇದ
3. ಮಹಾಭಾರತ
4. ಗದುಗಿನ ನಾರಣಪ್ಪ
5. ಹತ್ತು
6. ಬಾದಾಮಿ
7. ಬೊಪ್ಪಣ ಪಂಡಿತ
8. ಚಂದ್ರಗಿರಿ
9. ವ್ಯಾಸರಾಯರು
10. ತಾಟಕಿ
11. ಹಳೇಬೀಡು
12. ಕನ್ಯಾಕುಮಾರಿ
13. ರಾಮಕೃಷ್ಣ ಪರಮಹಂಸ
14. ಕುಂತೀಭೋಜ
15. ಸತ್ಯವಾನ

## ಸನಾತನ ಧರ್ಮರಂಗ.

### ಪುಣ್ಯಕ್ಷೇತ್ರಗಳು

ಉತ್ತರಗಳು

**ಎಡದಿಂದ ಬಲಕ್ಕೆ**

1. ತಿರುಮಲ
3. ಕಾಂಚಿಪುರ
4. ಹಾಸನ
6. ಶ್ರೀರಂಗಂ
8. ಸಮಯಪುರ
9. ಕಾಶಿ
11. ಭದ್ರಾಚಲ
12. ತಿರುತ್ತಣಿ
13. ಮಂತ್ರಾಲಯ
17. ಅಯೋಧ್ಯಾ
19. ಮೇಲುಕೋಟೆ
20. ರಾಮೇಶ್ವರ
21. ಪುರಿ
22. ತಂಜಾವೂರು

**ಮೇಲಿನಿಂದ ಕೆಳಕ್ಕೆ**

2. ಮಹಾಬಲಿಪುರ
5. ಗಯ
7. ಶ್ರೀ ಪೆರಂಬುದೂರು
10. ಶಿರಡಿ
13. ಮಂಗಾಪುರ
14. ಕನ್ಯಾಕುಮಾರಿ
15. ಅಹೋಬಿಲ
16. ದ್ವಾರಕಾಪುರಿ
18. ಮಧುರೈ

# ನಿಮ್ಮ ಭವಿಷ್ಯ

ಡಾ॥ ಅರ್ಕ ಸೋಮಯಾಜಿ.

1—12—80 ರಿಂದ
31—12—80 ವರೆಗೆ



## ಮೇಷ :

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

ಯಶಸ್ಸು, ಹೊಸ ಉಡುಪು ಆರೋಗ್ಯಗಳನ್ನು ಹೊಂದಿದರೂ ಈ ರಾಶಿಯವರು ಸ್ವಲ್ಪ ವಿವಾದ ಗಳಿಗೊಳಗಾಗಿ ಆ ಮೂಲಕವಾಗಿ ಚಿಂತಾಗ್ರಸ್ತ ರಾಗುವರು. 14ರ ನಂತರ ಒಳಿತಿನ ಕಾಲ. ಕುಜನರು ಈ ರಾಶಿಯವರಿಗೆ ತೊಂದರೆ ನೀಡ ಲೆತ್ನಿಸಿದರೂ ಸಫಲರಾಗರು. 1, 9, 10. 22, 23 ಪ್ರಯಾಣ, ಪ್ರಯಾಸ ಅಥವಾ ಅನಾ ರೋಗ್ಯ. 12, 13, 16, 17 ಧನನಷ್ಟ ಅಥವಾ ಅನಗತ್ಯವೆಚ್ಚ. 3, 4, 5, 6 ಚಿಂತೆ ಅಥವಾ ಅನಾರೋಗ್ಯ.



## ವೃಷಭ :

( ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

ಮಕ್ಕಳ ಮೂಲಕ ತುಸು ಚಿಂತೆ. ಸ್ವಲ್ಪ ಅನಾರೋಗ್ಯ ಹಾಗೂ ಹೆಂಡತಿಯ ಅತೃಪ್ತಿ. ಆದರೂ ಈ ರಾಶಿಯವರು ಪುಣ್ಯಭಾವ ಹೊಂದಿ ಧನಲಾಭ ಪಡೆಯುವರು. 3. 4, 12, 13, 20, 21 ಧನಾಗಮ. 22, 23, 24 ಒಳಿತಿನ ದಿನಗಳಲ್ಲ. 25, 26 ಪ್ರಯಾಣ, ಪ್ರಯಾಸ. 14, 15, 20, 21 ಅನಗತ್ಯ ವೆಚ್ಚ.



## ಮಿಥುನ :

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

ಈ ರಾಶಿಯವರು ಅಧಿಕ ವೆಚ್ಚ ಹಾಗೂ ಧನ ನಷ್ಟ ಹೊಂದುವರು. ತಿಂಗಳ ಮೊದಲರ್ಧದಲ್ಲಿ ಪ್ರಯಾಣ, ಹೊಟ್ಟೆನೋವು. ನಂತರದ ಅರ್ಧ ದಲ್ಲಿ ಹೆಂಡತಿಯ ಅತೃಪ್ತಿ, ಅನಾರೋಗ್ಯ. 9ರ ನಂತರ ಹೊಸ ಉಡುಪು ಸಂತಸ. ಆದರೆ ಸ್ತ್ರೀಯರ ಮೂಲಕ ಅಥವಾ ಬಂಧುಗಳ ಮೂಲಕ ತುಸುಚಿಂತೆ. 16, 17, 20, 21 ಧನನಷ್ಟ. 1, 2 ಪ್ರಯಾಣ, 7, 8, 9, 10 ವ್ಯವಹಾರಕ್ಕೆ ಒಳ್ಳೆಯ ದಿನಗಳಲ್ಲ.



## ಕರ್ಕಾಟಕ :

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

ತೀವ್ರಕ್ರಿಯಾಶೀಲತೆ ಹಾಗೂ ಉನ್ನತಭಾವ ಗಳು ಸೂಚಿತವಾಗಿದೆ. ಕುಜನರು ಈ ರಾಶಿಯವ ರಲ್ಲಿ ವಿವಾದಗಳನ್ನುಂಟಾಗಿಸಲು ಪ್ರಯತ್ನಿ ಸುವರು. ತಿಂಗಳ ಮೊದಲ ವಾರದಲ್ಲಿ ಬಂಧುಗಳ ಆಗಮನ, ಹಿರಿಯರ ಪ್ರಶಂಸೆ. ತಿಂಗಳ ಎರಡ ನೆಯ ಪಕ್ಷದಲ್ಲಿ ಪ್ರಯಾಣ. ಮೊದಲ ವಾರವು ವಿಶೇಷತಃ ಸಂತಸದಾಯಕ. ಆದರೆ ಅನೇಕ ಬಾರಿ ಹೆಂಡತಿಯ ಅತೃಪ್ತಿ ಅಥವಾ ಹೊಟ್ಟೆ ನೋವು. 9, 10 ವ್ಯವಹಾರಯೋಗ್ಯ ದಿನ ಗಳಲ್ಲ. 14, 15, 16, 17 ಸಂತಸ. 19, 20, 21, 30, 31 ಪ್ರಯಾಣ.



## ಸಿಂಹ :

(ಮಖ, ಪೂರ್ವ ಫಾಲ್ಗುಣ ಉತ್ತರ 1ನೇ ಪಾದ:)

ಅಧಿಕ ವೆಚ್ಚ ಅಥವಾ ಬಂಧುಗಳ ಆಗಮನ, ಹಿರಿಯರ ಪ್ರಶಂಸೆ. ತಿಂಗಳ ದ್ವಿತೀಯ ಪಕ್ಷದಲ್ಲಿ ಯಶಸ್ಸು. ಧನಾಗಮವಾದರೂ ವಿಶೇಷ ವೆಚ್ಚ. 14, 15, ಹೊಟ್ಟೆನೋವು. 1, 2, 20, 21, 25, 26, ವೆಚ್ಚ. 9, 10 ಪ್ರಯಾಣ ಹಾಗೂ ಪ್ರಯಾಸ.

## ಸಪ್ತಗಿರಿ ಚಂದಾದಾರರಲ್ಲಿ

ವಾರ್ಷಿಕ ಚಂದಾ ರೂ. 6–00

ಸಪ್ತಗಿರಿ ಮಾಸಪತ್ರಿಕೆಯ ಚಂದಾದಾರರು ಗಳಲ್ಲಿ ಕೆಳಕಂಡವರ ಚಂದಾಗಳು 28-2-81 ತಾರೀಖಿಗೆ ಮುಗಿಯಲಿವೆ. ಚಂದಾದಾರರು ಸಹಾನುಭೂತಿಯಿಂದ ಹಣವನ್ನು ಮನಿಯಾ ರ್ಡರು ಮೂಲಕ ಕಳುಹಿಸಿ ಕೊಡಬೇಕೆಂದು ಕೋರುತ್ತೇವೆ. ಚಂದಾದಾರರು ದಯವಿಟ್ಟು ಮನಿಯಾರ್ಡರು ಕೂಪನಿನಲ್ಲಿ ತಮ್ಮ ಚಂದಾ ಸಂಖ್ಯೆಯನ್ನು ನಮೂದಿಸಬೇಕು.

18, 21, 22, 33, 35 43a, 53, 115, 245, 255, 261, 263, 454, 496, 499, 594, 677, 933, 934 to 943a, 954, 956 to 964, 965 to 974, 976 to 988, 991, 992, 994 to 998, 1113a.

ಚಂದಾ ಹಣವನ್ನು ಎಮ್. ಓ. ಮೂಲಕ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು. ಚೆಕ್ಕು ಗಳನ್ನು ಕಳುಹಿಸಿದ್ದಲ್ಲಿ, ಅಥವಾ ವಿಳಾಸ ತಪ್ಪಿದ್ದಲ್ಲಿ, ಆಗುವ ಆಲಸ್ಯಕ್ಕೆ ಯಾವ ವಿಧ ದಲ್ಲೂ ಈ ಕಾರ್ಯಾಲಯ ಬಾಧ್ಯತೆ ವಹಿಸ ಲಾರದು. ಚಂದಾದಾರರೆಲ್ಲರೂ ಸಹೃದಯತೆ ಯಿಂದ ಚಂದಾ ಕಳುಹಿಸಬೇಕೆಂದು ವಿನಂತಿ. ಮಿಕ್ಕ ವಿವರಗಳಿಗೆ :

ವೆಲ್‌ಫೇರ್ ಆಫೀಸರ್,
ಸೇಲ್ಸ್ ವಿಂಗ್,
ತಿ. ತಿ. ದೇ. ಪ್ರೆಸ್ ಕಾಂಪೌಂಡ್
ತಿರುಪತಿ.



### ಕನ್ಯಾ :

(ಉತ್ತರ 2,3,4, ಪಾದ, ಹಸ್ತ, ಚಿತ್ತ 1,2 ಪಾದ)

ಮಕ್ಕಳ ಮೂಲಕ ಚಿಂತೆ ಅಥವಾ ಹೆಂಡತಿ ಯೊಡನೆ ವಿವಾದ. ತುಸು ಅನಾರೋಗ್ಯ ಅಥವಾ ಧನಲಾಭ. 11, 12, ಪ್ರಯಾಣ ಅಥವಾ ತುಸು ಅನಾರೋಗ್ಯ. 2, 3, 9, 10, 20, 21, ಧನಲಾಭ. 16, 17 ಹೊಟ್ಟೆನೋವು.



### ತುಲಾ :

(ಚಿತ್ತ 3,4ಪಾದ ಸ್ವಾತಿ, ವಿಶಾಖಾ1,2,3 ಪಾದ)

ಧನಾಗಮ, ಹೊಸ ಉಡುಪು. ತಿಂಗಳ ಮೊದಲರ್ಧ ವಿಶೇಷತಃ ಒಳಿತು, ನಂತರ ತುಸು ಅನಾರೋಗ್ಯ. ಆಗಾಗ ಪ್ರಯಾಣ, ಪ್ರಯಾಸ, ಗೌರವ. ಕುಜನರಿಂದ ಪ್ರಾಯಶಃ ವಿವಾದ. 7, 8, 12, 13, 22, 23 ಧನಾಗಮ. 9, 10, ಪ್ರಯಾಣ. 16, 17, 18, 19 ಒಳ್ಳೆಯ ದಿನಗಳಲ್ಲ.



### ವೃಶ್ಚಿಕ :

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ಸಂತಸ, ಧನಲಾಭ, ಯಶಸ್ಸು. ತಿಂಗಳ ದ್ವಿತೀಯಾರ್ಧವು ವಿಶೇಷತಃ ಒಳಿತು. ಕುಮಾರ್ಗದಲ್ಲಿ ಅಥವಾ ಮಕ್ಕಳ ಮೂಲಕ ಧನ. ಆದರೆ ಅಧಾರ್ಮಿಕ ಹಾಗೂ ಪಾಪ ಪ್ರವರ್ತನೆ. 7, 8, 14, 15, 25, 26 ಧನಾಗಮ. 12, 13, ಪ್ರಯಾಣ. 19, 20, 21, ಒಳಿತಿನ ದಿನಗಳಲ್ಲ.



### ಧನುಸ್ಸು :

(ಮೂಲ, ಪೂ. ಉ. 1 ನೇ ಪಾದ)

ವಿವಾದ ಆ ಮೂಲಕವಾದ ಧನನಷ್ಟ. ಆಪ್ತರಿಂದ ಬೇರ್ಪಡೆ ಆದರೂ ಶೃಂಗಾರ ಭಾವ. ದುರ್ಬೋಧನೆಯಿಂದ ಪಥಭ್ರಾಂತಿ. ಅಧಿಕೃತವಾಗಿ ಅಸಂತೋಷ. ತಿಂಗಳ ಪ್ರಥಮಾರ್ಧದಲ್ಲಿ ಸುಸ್ತು. 9, 10, 16, 17, 27, 28 ಒಳಿತಿನ ದಿನಗಳು. 3, 4, ಅತ್ಯಧಿಕ ವೆಚ್ಚ.



### ಮಕರ :

(ಉ. 2,3,4 ಪಾದ, ಶ್ರವಣ, ಧನಿಷ್ಠ 1,2 ಪಾದ)

ಕುಜನ ಸಲಹೆಗಳಿಂದ ವಿವಾದ ಅಥವಾ ಧನ ನಷ್ಟ. ತುಸು ಅನಾರೋಗ್ಯ, ಹೊಸ ಉಡುಪು. ತಿಂಗಳ ದ್ವಿತೀಯಾರ್ಧದಲ್ಲಿ ಪ್ರಯಾಣ, ಪ್ರಯಾಸ, ಅಧಾರ್ಮಿಕ ಪ್ರವರ್ತನೆ. ಆಯಕ್ಕಿಂತ ವ್ಯಯ ಹೆಚ್ಚು. 12, 13, 15, 19, 0, 30, 31, ಒಳಿತಿನ ದಿನಗಳು. 22, 23, 24, ಒಳಿತಿನ ದಿನಗಳಲ್ಲ. 16, 17, ಪ್ರಯಾಣ.



### ಕುಂಭ :

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3ಪಾ)

ಈ ರಾಶಿಯವರಿಗೆ ತಿಂಗಳಿನಲ್ಲಿ ಆಪ್ತರಿಂದ ಬೇರ್ಪಡೆ, ಪ್ರಯಾಣ, ಪ್ರಯಾಸ, ಧನಲಾಭ ಹಾಗೂ ಸುಸ್ನೇಹಿತರು. ನೇತ್ರಭಾದೆ ಅಥವಾ ಹೆಂಡತಿಯ ಅತೃಪ್ತಿ. ತಿಂಗಳ ಪ್ರಥಮಾರ್ಧ ಸಾಪೇಕ್ಷವಾಗಿ ಒಳಿತು. 5, 6, 14, 15, 20, 21 ಒಳ್ಳೆಯ ದಿನಗಳು. 25, 26, 27, 28 ಒಳಿತಿನ ದಿನಗಳಲ್ಲ. 18 19 ಪ್ರಯಾಣ.



### ಮೀನ :

(ಪೂ. ಭಾ. 4 ಪಾದ ಉ. ಭಾ. ರೇವತಿ)

ಆಗಾಗ ಪ್ರಯಾಣ, ಹೆಚ್ಚು ವೆಚ್ಚ ಆದರೂ ಈ ರಾಶಿಯವರು ಶೃಂಗಾರಭಾವ ಹೊಂದುವರು. ಧನಲಾಭವಾಗುವುದು ವೆಚ್ಚಿಸಲಿಕ್ಕಾಗಿ ಮಾತ್ರ. ವಿವಾದಗಳುಂಟಾದರೂ ಯಶ, ಹಾಗೂ ಸಂತಸ. 7, 8, 16, 17, 22, 23 ಒಳಿತಿನ ದಿನಗಳು. 1, 2, 3, 4 ಒಳಿತಿನ ದಿನಗಳಲ್ಲ. 20, 21 ಪ್ರಯಾಣ.




Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501·

# 1981ರ ಪ್ರಮುಖ ದಿನಗಳು

## (ತಿರುಮಲೆ ತಿರುಪತಿ ದೇವಸ್ಥಾನಗಳ ಪಂಚಾಂಗದಂತೆ)

ಜನವರಿ :

13 ಭೋಗಿ ಹಬ್ಬ
14 ಸಂಕ್ರಾಂತಿ (ಮಕರ)
15 ಸಾವಿತ್ರೀ ವ್ರತ
20 ರಾಮಕೃಷ್ಣ ತೀರ್ಥ ಮುಕ್ಕೋಟಿ

ಫೆಬ್ರವರಿ :

11 ರಥಸಪ್ತಮಿ
12 ಮಧ್ವನವಮಿ
14 ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವಾರಂಭ
18 ಕುಮಾರಧಾರಾ ತೀರ್ಥ ಮುಕ್ಕೋಟಿ

ಮಾರ್ಚಿ :

4 ಮಹಾಶಿವರಾತ್ರಿ
16 ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ
25 ನಾಗಲಾಪುರದಲ್ಲಿ ತೆಪ್ಪೋತ್ಸವಾರಂಭ

ಏಪ್ರಿಲ್ :

1 ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವಾರಂಭ
5 ಚಾಂದ್ರಮಾನಯುಗಾದಿ, ಶ್ರೀ ವೆಂಕಟೇಶ್ವರಸ್ವಾಮಿ ಆಸ್ಥಾನೋತ್ಸವ
13 ಶ್ರೀರಾಮನವಮಿ, ಸೌರಮಾನ ಯುಗಾದಿ
16 ತಿರುಮಲೆಯಲ್ಲಿ ವಸಂತೋತ್ಸವ
17 ತಿರುಮಲೆಯಲ್ಲಿ ಬೆಳ್ಳಿ ರಥ
19 ನಾಗಲಾಪುರದಲ್ಲಿ ಬ್ರಹ್ಮೋತ್ಸವಾರಂಭ

ಮೇ :

11 ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವಾರಂಭ
12 ಗಂಗಾಜಾತ್ರೆ
17 ಶ್ರೀ ನರಸಿಂಹ ಜಯಂತಿ, ನಾರಾಯಣವನದಲ್ಲಿ ಬ್ರಹ್ಮೋತ್ಸವಾರಂಭ
28 ಶ್ರೀ ಹನುಮಜ್ಜಯಂತಿ

ಜೂನ್ :

13 ಶ್ರೀ ಪದ್ಮಾವತೀದೇವಿ ತೆಪ್ಪೋತ್ಸವಾರಂಭ

ಜುಲೈ :

7 ಮಂಗಾಪುರದಲ್ಲಿ ಸಾಕ್ಷಾತ್ಕಾರ ವೈಭವ
16 ಆಣಿವರ ಆಸ್ಥಾನ
17 ವ್ಯಾಸಪೂರ್ಣಿಮಾ

ಆಗಸ್ಟ್ :

5 ಗರುಡ ಪಂಚಮಿ
11 ತಿರುಮಲೆಯಲ್ಲಿ ಪವಿತ್ರೋತ್ಸವ
14 ವರಲಕ್ಷ್ಮೀವ್ರತ
16 ಗಾಯತ್ರಿ ಜಪ
23 ಗೋಕುಲಾಷ್ಟಮಿ

ಸೆಪ್ಟಂಬರ್ :

2 ವಿನಾಯಕ ಚತುರ್ಥಿ
13 ಅನಂತಪದ್ಮನಾಭ ವ್ರತ
27 ಮಹಾಲಯ ಅಮಾವಾಸ್ಯೆ
30 ತಿರುಮಲೆಯಲ್ಲಿ ಬ್ರಹ್ಮೋತ್ಸವಾರಂಭ

ಅಕ್ಟೋಬರ್ :

5 ಸರಸ್ವತೀ ಪೂಜೆ
6 ದುರ್ಗಾಷ್ಟಮಿ
26 ನರಕಚತುರ್ದಶಿ
27 ದೀಪಾವಳಿ, ಕಾವೇರಿನದೀ ಪುಷ್ಕರ ಆರಂಭ

ನವಂಬರ್ :

7 ನಾರಾಯಣವನ ತೆಪ್ಪೋತ್ಸವ
9 ಚಕ್ರತೀರ್ಥ ಮುಕ್ಕೋಟಿ
23 ತಿರುಚಾನೂರು ಬ್ರಹ್ಮೋತ್ಸವಾರಂಭ

ಡಿಸೆಂಬರ್ :

1 ಪಂಚಮೀತೀರ್ಥ
2 ಸ್ಕಂಧ ಷಷ್ಠಿ
10 ದತ್ತಾತ್ರೇಯ ಜಯಂತಿ
11 ಕಪಿಲ ತೀರ್ಥ ಮುಕ್ಕೋಟಿ